

Vice President Dr. Shankar Dayal Sarma visits Tirumala and worships Lord Venkateswara before assuming his office





ನಿನ್ನದು ಜೀವನ ನಿನ್ನದೊ ॥ ಪ ॥
ನದಲ್ಲಿ ಬಾಹೊ ಸುಖದುಃಖ ನಿನ್ನದಯ್ಯಾ ॥ ಅ.ಪ ॥

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಯಿಂದ ಕೇಳುವ ಕಥೆ ನಿನ್ನದೊ
ನವ ಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ —1—

ಗರುಡಿ ಗಂಧ ಕಸ್ತೂರಿ ಪರಿಮಳಗಳ
ಲೇಪಿಸಿ ಕೊಂಬುದು ನಿನ್ನದು
ರಸದನ್ನಕ್ಕೆ ನಲಿದಾಡುವ ಜಿಹ್ವೆ
ರುಚಿಗೊಂಡರೆ ಆ ರುಚಿ ನಿನ್ನದಯ್ಯ —2—

ಮಾಯಾಪಾಶದ ಬಲೆಯೊಳಗೆ ಸಿಲ್ಕಿದಂಥ
ಕಾಯಪಂಚೇಂದ್ರಿಯಗಳು ನಿನ್ನವೊ
ಕಾಯಜ ಜನಕ ಒಡೆಯ ಆದಿಕೇಶವ
ಗಾಯ ನೀನಲ್ಲದೆ ನರರು ಸ್ವತಂತ್ರರೆ —3—

—ಶ್ರೀ ಕನಕದಾಸರು.

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನರವ ದೇವಾಲಯ

ತಿ ರು ಚಾ ನೂ ರು

# ವಾರ್ಷಿಕ ಬ್ರಹ್ಮೋತ್ಸವ

## 16-11-87 ರಿಂದ 25-11-87 ವರೆಗೆ

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 16-11-1987 | ಸೋಮ | — | ಶ್ರೀ ಸೇನಾಧಿಪತಿ ಉತ್ಸವ ಅಂಕುರಾರ್ಪಣೆ |
| 17-11-1987 | ಮಂಗಳ | ಚಿನ್ನದ ತಿರುಚ್ಚಿ ಉತ್ಸವ- ಧ್ವಜಾರೋಹಣ | ಚಿಕ್ಕ ಶೇಷವಾಹನ |
| 18-11-1987 | ಬುಧ | ಟಾಂಜಾಸ್ ಉತ್ಸವ | ಹಂಸವಾಹನ |
| 19-11-1987 | ಗುರು | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ |
| 20-11-1987 | ಶುಕ್ರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 21-11-1987 | ಶನಿ | ಪಲ್ಲಕ್ಕಿಉತ್ಸವ | ಗಜವಾಹನ |
| 22-11-1987 | ಭಾನು | ಬೆಳಗ್ಗೆ : ಹನುಮದ್ವಾಹನ<br>ಸಂಜೆ : ವಸಂತೋತ್ಸವ | ಗರುಡವಾಹನ |
| 23-11-1987 | ಸೋಮ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 24-11-1987 | ಮಂಗಳ | ರಥೋತ್ಸವ | ಅಶ್ವವಾಹನ |
| 25-11-1987 | ಬುಧ | ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಹರಿಕಥೆ, ಸಂಗೀತ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ತಿರುಚಾನೂರು ತಿರುಪತಿಯಿಂದ ಸುಮಾರು ಐದು ಮೈಲಿ ದೂರದಲ್ಲಿದ್ದು, ತಿರುಪತಿಯಿಂದ ವಿಶೇಷವಾಗಿ ಬಸ್ ಸೌಲಭ್ಯ ಉಂಟು. ಹೆಚ್ಚಿನ ವಿವರಗಳಿಗಾಗಿ ನಿಮ್ಮ ಬಳಿಯ ತಿ. ತಿ. ದೇ ವಿಚಾರಣಾ ಕಚೇರಿಯಲ್ಲಿ ವಿಚಾರಿಸಿ-

ತಿ. ತಿ. ದೇವಸ್ಥಾನಗಳು.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ



ಗೌರವ ಸಂಪಾದಕರು:

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.

ಸಂಪಾದಕ:

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:

ಡಾ ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

ಸಂಪುಟ ೧೮] ಅಕ್ಟೋಬರ್ ೧೯೮೭ [ಸಂಚಿಕೆ ೫

# ವಿಷಯಸೂಚಿ


| | | |
|---|---|---|
| ಸಂಪಾದಕೀಯ | | ... 4 |
| ಉಪನಿಷತ್ತುಗಳಲ್ಲಿ ಜೀವನದೃಷ್ಟಿ | —ಪ್ರೊ॥ ಕೆ. ಟಿ. ಪಾಂಡುರಂಗಿ | ... 5 |
| ಕೊಲ್ಲೂರು ಮೂಕಾಂಬಿಕೆ | —ಶ್ರೀನಿವಾಸ ತಂತ್ರಿ | ... 7 |
| ಐರಾವತ ನೋಂಪಿ—ಕಾವ್ಯಪರಿಚಯ | —ಕೂಡಲಿ ಜಗನ್ನಾಥಶಾಸ್ತ್ರಿ | ... 9 |
| ತ್ವಚ್ಚರಿತಂ ವಿಭೋ ವಿಚಿತ್ರಂ | —ವಿದ್ವಾನ್ ಬ. ನ. ಗುಂಡೂರಾವ್ | ... 13 |
| ಶಂಖ ಹಾಗೂ ಪಾಂಚಜನ್ಯ | —ವಿದ್ವಾನ್ ಬಿ. ಬಾಲಗಣಪತಿಭಟ್ಟ | ... 15 |
| ಜ್ಞಾನದಾಯಕ ದೀಪಾವಳಿ | —ಕೆ. ಕೇಶವಮೂರ್ತಿ | ... 17 |
| ತುಳಸೀಪೂಜೆ | —ಸುಮಿತ್ರಾ ಶಾನಭಾಗ | ... 31 |
| ಮಹಾದೇವಿ ವರ್ಮಾ | —ಅಂದನೂರು ಶೋಭಾ | ... 23 |
| ಶ್ರೀರಾಮಕೃಷ್ಣ ಪರಮಹಂಸರ ದೃಷ್ಟಿಯಲ್ಲಿ ಸ್ತ್ರೀ | —ಕವಿತಾಕೃಷ್ಣ | ... 25 |
| ದೀಪಾವಳಿ | —ಪಿ. ವಿ. ಕೃಷ್ಣ ತಂತ್ರಿ | ... 27 |
| ನುತಿಪೆ ನಿನ್ನ ಶ್ರೀಮಹಾಭಗವತಿ | —ಬಿ. ಎಸ್. ರಾಮಾಚಾರ್ | .. 30 |
| ಸರಸ್ವತೀ ದೇವಿ | —ಅದ್ಯರಾಮಾಚಾರ್ಯ | ... 33 |
| ವಾರ್ತಾಲಹರಿ | | ... 38 |
| ಧರ್ಮಕರ್ತರ ಮಂಡಳಿಯ ತೀರ್ಮಾನಗಳು | | ... 38 |


ಮುಖಚಿತ್ರ: ಶ್ರೀರಾಜರಾಜೇಶ್ವರೀ ದೇವಿ.

ಹಿಂಬದಿಯಲ್ಲಿ: ದೀಪಾವಳಿಯ ಶುಭಾಶಯ —ಚಿತ್ರ—ಮ. ಶ್ರೀ.

ಒಳಗಡೆ: 1 ತಿರುಮಲೆಯಲ್ಲಿ ಉಪರಾಷ್ಟ್ರಪತಿ ಡಾ॥ ಶಂಕರದಯಾಳ ಶರ್ಮ.
2 ಕಾಕಿನಾಡದ ತಿ. ತಿ. ದೇ. ಕಲ್ಯಾಣ ಮಂಟಪದಲ್ಲಿ ಉದ್ಘಾಟನೆಯಲ್ಲಿ ಆಂಧ್ರ ಪ್ರದೇಶದ ಮುಖ್ಯ ಮಂತ್ರಿ ಶ್ರೀ ಎನ್. ಟಿ. ರಾಮಾರಾವ್.

# ಉಪನಿಷತ್ತುಗಳಲ್ಲಿ ಜೀವನದೃಷ್ಟಿ

ಪ್ರೊ|| ಕೆ.ಟಿ. ಪಾಂಡುರಂಗಿ

ಉಪನಿಷತ್ತುಗಳು ಭಾರತೀಯ ತತ್ತ್ವಜ್ಞಾನದ ಉಗಮಸ್ಥಾನಗಳಾಗಿವೆ. ಪುರಾತನ ಋಷಿಗಳು ನಿರಂತರತಪಸ್ಸಿನಿಂದಲೂ ಸತತ ಅಭ್ಯಾಸದಿಂದಲೂ ಕಂಡುಕೊಂಡ ಸತ್ಯವು ಅವುಗಳಲ್ಲಿ ಅಡಕವಾಗಿದೆ.

ಆಹಾರ ನಿದ್ರಾ ಭಯ ಮೈಥುನಾದಿ ಪಶುಸಮಾನ ವೃತ್ತಿಯಿಂದ ಜೀವನವನ್ನು ಕಳೆಯದೆ ಘನವಾದ ಉದ್ದೇಶದಿಂದಲೂ ಗೌರವಯುತವಾದ ಮತ್ತು ನೀತಿ ಸಂಪನ್ನವಾದ ಕ್ರಮದಿಂದಲೂ ಜೀವನವನ್ನು ಸಾಗಿಸುವುದರಲ್ಲಿ ಮಾನವನ ಕೃತಕೃತ್ಯತೆಯಿದೆ. ಈ ರೀತಿಯಿಂದ ಜೀವನವನ್ನು ಸಾಗಿಸಲು ನಿರ್ದುಷ್ಟವಾದ ತತ್ತ್ವಜ್ಞಾನವೂ ಯೋಗ್ಯವಾದ ಜೀವನ ದೃಷ್ಟಿಯೂ ಅವಶ್ಯವಾಗಿವೆ. ಇಂಥ ತತ್ತ್ವ ಮತ್ತು ಜೀವನ ದೃಷ್ಟಿಗಳ ವಿವೇಚನೆಯು ಉಪನಿಷತ್ತುಗಳಲ್ಲಿದೆ.

ನಮ್ಮ ಜೀವನ ಯಾತ್ರೆಯುದ್ದಕ್ಕೂ ಭೌತಿಕ ಸುಖ ಸಂಪತ್ತುಗಳೂ ಮಾನ ಸನ್ಮಾನಗಳೂ ದೊರೆತು ಜೀವನವು ಅಕ್ಲಿಷ್ಟವೂ ತೃಪ್ತಿಪರ್ಯವಸಾಯಿಯೂ ಆಗಿರಬೇಕೆಂಬುದು ಒಂದು ದೃಷ್ಟಿ. ಧರ್ಮ ಕರ್ಮಾದಿಗಳನ್ನು ಮಾಡಿ ಇಹದಲ್ಲಿರುವ ಪ್ರತಿಕೂಲಗಳೂ ಕ್ಲೇಶಗಳೂ ಇಲ್ಲದಿರುವ ಸ್ವರ್ಗಾದಿ ಸುಖಗಳನ್ನು ಪಡೆಯಬೇಕೆಂಬುದು ಇನ್ನೊಂದು ದೃಷ್ಟಿ. ಇವೆರಡೂ ಭೋಗ ದೃಷ್ಟಿಗಳು. ಈ ಎರಡು ವಿಧವಾದ ಭೋಗ ದೃಷ್ಟಿಗಳೂ ಉಪನಿಷತ್ತುಗಳಿಗೆ ಸಮ್ಮತವಾದ ಜೀವನ ದೃಷ್ಟಿಯಲ್ಲ. ಕಠೋಪನಿಷತ್ತಿನಲ್ಲಿ ಬರುವ ನಚಿಕೇತನ ಕಥೆಯೂ ನಚಿಕೇತ–ಯಮರ ಸಂವಾದವೂ ಈ ಮಾತನ್ನು ಸ್ಪಷ್ಟಪಡಿಸುತ್ತವೆ. ತಂದೆಯ ಶಾಪದಿಂದ ಯಮಲೋಕಕ್ಕೆ ಹೋದ ನಚಿಕೇತನಿಗೆ ಯಮನು ಮೂರು ವರಗಳನ್ನು ಕೊಡುವನು. ಅದರಲ್ಲಿ ಮೂರನೆಯ ವರದಿಂದ ನಚಿಕೇತನು ಪರತತ್ತ್ವದ ಸ್ವರೂಪವನ್ನು ತಿಳಿಸಲು ಬೇಡುವನು. ಆಗ ಯಮನು,'ಶತಾಯುಷಃ ಪುತ್ರ ಪೌತ್ರಾನ್ ವೃಣೀಷ್ವ ಬಹೂನ್ ಪಶೂನ್ ಹಸ್ತಿ ಹಿರಣ್ಯಮಶ್ವಾನ್...' 'ಭೂಮೇರ್ಮಹದಾಯತನಂ ವೃಣೀಷ್ವ', 'ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ''ಇಮಾ ರಾಮಾಃ ಸರಥಾಃ ಸತೂರ್ಯಾಃ ನ ಹೀದೃಶಾಃ ಲಂಭನೀಯಾ ಮನುಷ್ಯೈಃ' ಆಯುಷ್ಯ, ಪುತ್ರ, ಪಶುಗಳು, ಐಶ್ವರ್ಯ, ರಾಜ್ಯ ಸುಂದರಿಯರು ಬೇಕಾದುದನ್ನು ಬೇಡಿಕೋ. ಈ ಪರತತ್ತ್ವದ ಗೊಡವೆಗೆ ಬೀಳಬೇಡ– ಎಂದು ಹೇಳುವನು. ಆದರೆ ನಚಿಕೇತನು ನೂರು ವರ್ಷದ ಆಯುಷ್ಯವೂ ಕಡಿಮೆಯೇ. ಎಷ್ಟು ಐಶ್ವರ್ಯದಿಂದಲೂ ತೃಪ್ತಿಯಾಗುವುದು ಸಾಧ್ಯವಿಲ್ಲ. ನಿನ್ನ ಆನೆ. ಕುದುರೆ, ರಥಗಳೆಲ್ಲ ನಿನಗೇ ಇರಲಿ (ಅಪಿ ಸರ್ವಂ ಜೀವಿತಮಲ್ಪಮೇವ...... ನ ವಿತ್ತೇನ ತರ್ಪಣೀಯೋ ಮನುಷ್ಯಃ...... ತವೈವ ವಾಹಾಸ್ತವ ನೃತ್ಯಗೀತೇ) ಎನ್ನುವನು. ಮನುಷ್ಯನ ಎದುರಿಗಿರುವ ಪ್ರೇಯೋಮಾರ್ಗ ಮತ್ತು ಶ್ರೇಯೋಮಾರ್ಗಗಳಲ್ಲಿ ಶ್ರೇಯೋಮಾರ್ಗವನ್ನೇ ಆರಿಸಿಕೊಳ್ಳಬೇಕೆಂಬುದು ಕಠೋಪನಿಷತ್ತಿನ ಸ್ಪಷ್ಟವಾದ ಅಭಿಪ್ರಾಯವಾಗಿರುವುದು.

ಐಹಿಕ ಭೋಗವಾಗಲೀ ಸ್ವರ್ಗಾದಿ ಭೋಗವಾಗಲೀ ಜೀವನ ಗುರಿಯಾಗಿರಬಾರದು. ಪುತ್ರೈಷಣಾ, ವಿತ್ತೈಷಣಾ ಮತ್ತು ಲೋಕೈಷಣಾ –ಪುತ್ರ, ವಿತ್ತ ಮತ್ತು ಸ್ವರ್ಗಾದಿ ಸುಖಗಳು– ಈ ಮೂರನ್ನು ದಾಟಿ ನಿಲ್ಲುವುದರಲ್ಲಿಯೇ ಮಾನವನ ಶ್ರೇಯಸ್ಸಿದೆ ಎಂದು ಬೃಹದಾರಣ್ಯಕವು ಸಾರುತ್ತದೆ. ಒಮ್ಮೆ ಯಾಜ್ಞವಲ್ಕ್ಯನು ಗೃಹಸ್ಥಾಶ್ರಮವನ್ನು ಬಿಟ್ಟು, ತತ್ತ್ವಚಿಂತನೆಯಲ್ಲಿ ತೊಡಗಬೇಕೆಂದು ನಿರ್ಧರಿಸಿ ತನ್ನ ಇಬ್ಬರು ಹೆಂಡಂದಿರಾದ ಕಾತ್ಯಾಯನಿ ಮತ್ತು ಮೈತ್ರೇಯಿಯರನ್ನು ಕರೆದು– ಮೈತ್ರೇಯಿ ನನ್ನ ಸೊತ್ತನ್ನೆಲ್ಲ ನಿನಗೂ ಕಾತ್ಯಾಯನಿಗೂ ಹಂಚಿ ಕೊಡುವೆನು– ಎಂದು ಹೇಳುವನು. ಆದರೆ ಮೈತ್ರೇಯಿಯು ಈ ಪೃಥ್ವಿಯಲ್ಲಿಯ ವಸ್ತುಗಳೆಲ್ಲ ನನ್ನವಾದರೆ ನಾನು ಪರಮ ಸುಖಪಡೆಯಬಲ್ಲೆನೇ? (ಯನ್ನು ಮ ಇಯಂ ಭಗೋಃ ಸರ್ವಾ ಪೃಥಿವೀ ವಿತ್ತೇನ ಪೂರ್ಣಾಸ್ಯಾತ್ ಕಥಂ ತೇ ನಾಮೃತಾಸ್ಯಾಮ) ಎಂದು ಕೇಳುವಳು. ನಿನ್ನ ಜೀವಿತವೂ ಕೂಡ ಇನ್ನಿತರ ಸಾಮಾನ್ಯ ಜನರ ಜೀವಿತದಂತೆಯೇ ಆಗುವುದು. ಅಮೃತತ್ತ್ವವು ದೊರೆಯಲಾರದು. (ನೇತಿ ಹೋವಾಚ ಯಾಜ್ಞವಲ್ಕ್ಯಃ ಯಥೈವೋಪಕರಣವತಾಂಜೀವಿತಂ ಸ್ಯಾತ್ ತಥೈವತೇಜೀವಿತಂ ಸ್ಯಾತ್ ಅಮೃತತ್ವಸ್ಯ ತು ನಾಶಾಸ್ತಿ ವಿತ್ತೇನೇತಿ) ಎಂದು ಯಾಜ್ಞವಲ್ಕ್ಯನು ಹೇಳುವನು. ಆದಕ್ಕೆ ಮೈತ್ರೇಯಿಯು ಹಾಗಾದರೆ ಈ ನಿನ್ನ ಸೊತ್ತಿನಲ್ಲಿಯ ಪಾಲು ನನಗೆ ಬೇಡ ಎಂದು ಹೇಳುವಳು. ಮೈತ್ರೀ ಉಪನಿಷತ್ತಿನಲ್ಲಿ, ಕಾಮೋಪಭೋಗಗಳ ವೈಯರ್ಥ್ಯವು ಇದಕ್ಕೂ ನಿಷ್ಠುರವಾಗಿ ಪ್ರತಿಪಾದಿತವಾಗಿದೆ. ಅಸ್ಥಿ ಮಾಂಸಗಳ ಮುದ್ದೆಯಾದ ಅಶುಚಿ ಶರೀರಕ್ಕೆ ಕಾಮೋಪಭೋಗಗಳೇಕೆ ? (ಭಗವನ್ನಸ್ಥಿ ಮಾಂಸ ಚರ್ಮಸ್ನಾಯು ಮಜ್ಜಾ ಮಾಂಸಶುಕ್ರಶೋಣಿತಶ್ಲೇಷ್ಮಾಶ್ರು——ದೂಷಿತೇ ವಿಣ್ಮೂತ್ರ ವಾತ ಪಿತ್ತ ಕಫಸಂಘಾತೇ ದುರ್ಗಂಧೇ ನಿಃಸಾರೇಽಸ್ಮಿನ್ ಶರೀರೇ ಕಿಂ ಕಾಮೋಪಭೋಗೈಃ) ಕಾಮ ಕ್ರೋಧಾದಿ ಅರಿಷಡ್ವರ್ಗಗಳಿಗೆ ಬಲಿಯಾಗಿರುವ ಹಸಿವೆ, ನೀರಡಿಕೆ ಹುಟ್ಟು, ಸಾವುಗಳಿಗೆ ಗುರಿಯಾದ ಈ ಶರೀರಕ್ಕೆ ಕಾಮೋಪಭೋಗಗಳೇಕೆ ? (ಕಾಮ ಕ್ರೋಧ ಲೋಭ ಭಯ ವಿಷಾದೇರ್ಷ್ಯೇಷ್ಟ, ವಿಯೋಗಾನಿಷ್ಟ, ಸಂಪ್ರಯೋಗ ಕ್ಷುತ್ಪಿಪಾಸಾ ಜರಾಮೃತ್ಯುರೋಗ ಶೋಕಾದ್ಯೈರಭಿಹತೇಽಸ್ಮಿನ್ ಶರೀರೇ ಕಿಂ ಕಾಮೋಪಭೋಗೈಃ) ಗಿಡಬಳ್ಳಿ ಮತ್ತು ಹುಳಹುಪ್ಪಡಿಗಳಂತೆ ನಮ್ಮ ಶರೀರವೂ ನಶ್ವರವು. (ಯಥೇಮೇ ದಂಶಮಶಕಾದಯಸ್ತೃಣ ವನಸ್ಪತಯಃ) ಸುದ್ಯುಮ್ನ, ಭೂರಿದ್ಯುಮ್ನ, ಇಂದ್ರದ್ಯುಮ್ನ ಮೊದಲಾದ ಚಕ್ರವರ್ತಿಗಳು ಇಂದು ಹೇಳ ಹೆಸರಿಲ್ಲದಂತಾಗಿರುವರು. ಮಹಾಸಾಗರಗಳು ಒಣಗುವುವು, ಪರ್ವತಗಳು ಉರುಳುವವು, ದೇವತೆಗಳೂ ಸ್ಥಾನಭ್ರಷ್ಟರಾಗುವರು. ಇಂಥ ಅಸ್ಥಿರ ಮತ್ತು ನಶ್ವರ ಭೋಗಗಳೇಕೆ ?

ಹೀಗೆ ಉಪನಿಷತ್ತುಗಳಲ್ಲಿ ಜೀವನವು ಕೇವಲ ಭೋಗದೃಷ್ಟಿ ಪರವಾಗಿರುವುದನ್ನು ಬಲವಾಗಿ ಖಂಡಿಸಲಾಗಿದೆ. ಆದರೆ ಇದರಿಂದ ಉಪನಿಷತ್ತುಗಳು ಜೀವನದಲ್ಲಿ ನಿರಾಶಾವಾದವನ್ನೂ, ತಿರಸ್ಕಾರ ದೃಷ್ಟಿಯನ್ನೂ ಸಮರ್ಥಿಸುತ್ತವೆ ಎಂದು ಮಾತ್ರ ತಿಳಿಯಬಾರದು. ಈಶಾವಾಸ್ಯೋಪನಿಷತ್ತಿನಲ್ಲಿ ವಿಹಿತವಾದ ಕರ್ಮವನ್ನು ಮಾಡುತ್ತ ನೂರು ವರ್ಷ ಬಾಳಬೇಕು (ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ) ಎಂದು ಪ್ರತಿಪಾದಿಸಲಾಗಿದೆ. ಶ್ವೇತಾಶ್ವೇತರೋಪನಿಷತ್ತಿನಲ್ಲಿ ಪುತ್ರ, ಪಶು ಮತ್ತು ಆಯುಷ್ಯಗಳ ವಿಷಯಗಳಲ್ಲಿ ನಾವು ತೊಂದರೆಗೊಡಾಗುವುದು ಬೇಡ (ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ) ಎಂದು ಪ್ರಾರ್ಥಿಸಲಾಗಿದೆ. ತೈತ್ತರೀಯದಲ್ಲಿ ಮಾನವನ ಆನಂದವನ್ನು ವಿವರಿಸುತ್ತ ಆಶಾವಾದಿಯೂ, ದೃಢಚಿತ್ತನೂ, ಬಲಕಾಯನೂ (ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ) ಆಗಿರುವುದೇ ಮಾನುಷ ಆನಂದ ಎಂದು ಹೇಳಲಾಗಿದೆ. ಆದು

ದರಿಂದ ಕೇವಲ ಭೋಗದೃಷ್ಟಿಯು ಹೇಗೆ ಉಪನಿಷತ್ಕಾರರಿಗೆ ಸಮ್ಮತವಿಲ್ಲವೋ ಹಾಗೆಯೇ ನಿಷ್ಕ್ರಿಯ ವೃತ್ತಿಯೂ, ತಿರಸ್ಕಾರ ದೃಷ್ಟಿಯೂ ಸಮ್ಮತವಿಲ್ಲ. ಜನಕನ ಸಭೆಗೆ ಬಂದ ಯಾಜ್ಞವಲ್ಕ್ಯನಿಗೆ ಇಷ್ಟು ದೂರ ನೀನು ಏತಕ್ಕೆ ಬಂದೆ ಪಶುಗಳನ್ನು ಪಡೆಯುವುದಕ್ಕಾಗಿಯೋ ಅಥವಾ ತತ್ತ್ವದ ಚರ್ಚೆಗಾಗಿಯೋ (ಕಿಮರ್ಥಮಚಾರೀಃ ಪಶೂನಿಚ್ಛನ್ನಣ್ವಂತಾನ್) ಎಂದು ಕೇಳಿದ್ದಕ್ಕೆ ಯಾಜ್ಞವಲ್ಕ್ಯನಂಥ ಮಹರ್ಷಿಗೆ ಪಶುಗಳ ಆಶೆ ಇರಲಾರದೆಂಬುದು ಸ್ಪಷ್ಟವಿದೆ. ಆದರೆ ಪಶುಪುತ್ರಾದಿ ವಿಷಯದಲ್ಲಿ ಜಿಗುಪ್ಸೆಯನ್ನು ಬೆಳೆಯಿಸುವುದು ಉಪನಿಷತ್ತುಗಳ ಆಶಯವಲ್ಲವೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ನಿರ್ವಿಣ್ಣನೂ ವಿಷಣ್ಣನೂ ಆದವನಿಗೆ ಆತ್ಮವು ದೊರೆಯಲಾರದು (ನಾಯಮಾತ್ಮಾ ಬಲಹೀನೇನಲಭ್ಯಃ) ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ಹಾಗಾದರೆ ಒಂದು ಕಡೆಯಿಂದ ಸುಖೋಪಭೋಗಗಳನ್ನು ನಿಂದಿಸುವ ಮತ್ತು ಇನ್ನೊಂದು ಕಡೆಯಿಂದ ಸಕ್ರಿಯ ಜೀವನವನ್ನು ಬೋಧಿಸುವ ಉಪನಿಷತ್ಕಾರರ ಅಭಿಪ್ರಾಯವೇನು? ಭೋಗದೃಷ್ಟಿಯೂ ತಿರಸ್ಕಾರ ದೃಷ್ಟಿಯೂ ಅವರ ಜೀವನ ದೃಷ್ಟಿಯಲ್ಲದಿದ್ದರೆ ಅವರು ಉಪದೇಶಿಸುವ ಜೀವನ ದೃಷ್ಟಿ ಯಾವುದು?

ಮಾನವ ಜೀವನದ ಘನತೆಯು ಭೌತಿಕ ಪರಿಸರದ ದಾಸರಾಗುವುದರಿಂದಲೂ ಸಾಧಿಸುವುದಿಲ್ಲ. ಅಥವಾ ಅದನ್ನು ಜುಗುಪ್ಸೆಯಿಂದ ಕಾಣುವುದರಿಂದಲೂ ಸಾಧಿಸುವುದಿಲ್ಲ ಆದರೆ ಅದನ್ನು ಸಾಧನ ಭೂಮಿಯೆಂದು ಪ್ರಯೋಗಿಸಿ ಅದರಲ್ಲಿ ಇದ್ದೂ ಇಲ್ಲದಂತಿದ್ದು ತನ್ನನ್ನು ತಾನು ಅರಿತುಕೊಳ್ಳುವುದರಲ್ಲಿ ಮತ್ತು ವಿಶ್ವನಿಯಾಮಕನಿಗೆ ಸಮರ್ಪಿಸುವುದರಲ್ಲಿ ಮಾನವ ಜೀವನದ ಸಾರ್ಥಕತೆಯಿದೆ. ಈ ಅನಾಸಕ್ತಿ ದೃಷ್ಟಿ ಮತ್ತು ಸಮರ್ಪಣ ದೃಷ್ಟಿಗಳೇ ಉಪನಿಷತ್ಕಾರರಿಗೆ ಸಮ್ಮ ವಾದ ಜೀವನ ದೃಷ್ಟಿ.

ಇಂಥ ಅನಾಸಕ್ತಿ ದೃಷ್ಟಿ ಮತ್ತು ಸಮರ್ಪಣ ಭಾವಗಳು ಬೆಳೆದು ಬರಬೇಕಾದರೆ ಮಾನವನ ತನ್ನ ಪರಿಮಿತಿಯನ್ನು ಅರಿತುಕೊಳ ಬೇಕಾಗುವುದು. ತನ್ನ ಜೀವನದ ಯಾತ್ರೆಯ ಉದ್ದೇಶ ಮತ್ತು ಕ್ರಮಗಳನ್ನು ನಿರ್ಧರಿಸಿಕೊಳ ಬೇಕಾಗುವುದು. ತನ್ನ ಜೀವನ ಯಾತ್ರೆಯ ಉದ್ದೇಶ ಮತ್ತು ಕ್ರಮಗಳನ್ನು ನಿರ್ಧರಿಸಿಕೊಳ ವಾಗ ತನ್ನ ಇಚ್ಛೆ, ಪ್ರವೃತ್ತಿ ಕೃತಿಗಳೇ ನಿರ್ಣಾಯ ವೆಂದಾಗಲೀ, ತಾನಿರುವ ಕಾಲದೇಶಗಳಿಂ ಪರಿಮಿತವಾದ ಸಮಾಜದ ಇಚ್ಛೆ, ಪ್ರವೃತ್ತಿ, ಕೃ ಗಳೇ ಅಂತಿಮ ನಿರ್ಣಾಯಕವೆಂದಾಗಲೀ ಭಾವಿಸದೆ, ಸರ್ವವೂ ವಿಶ್ವಶಕ್ತಿಯ ಅಧೀ

(36 ನೇ ಪುಟ ನೋಡಿ

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**

**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**

**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**

**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**

**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( 2 ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ ( ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ )

ಬಸ್ ಹೊರಡುವ ಕಾಲ : ಬೆಳಗ್ಗೆ 6–00, ಬೆಳಗ್ಗೆ 10–00, ಸಂಜೆ 3–00

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
( ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ. )

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

# ಕೊಲ್ಲೂರು ಮೂಕಾಂಬಿಕೆ

ಒಂದೆಡೆ ಬೆಟ್ಟ ಗುಡ್ಡಗಳ ಸಾಲು; ನ್ನೊಂದೆಡೆ ಸೂರ್ಯಕಿರಣ ಭೂಮಿಯನ್ನು ಸ್ಪರ್ಶಿಸದಂತೆ ದಟ್ಟನೆ ಬೆಳೆದ ವನಸಿರಿ; ಮುಗಿಲನ್ನು ಚುಂಬಿಸಲು ಸ್ಪರ್ಧಿಸಿ ನಿಂತಿರುವ ಗಿರಿಶೃಂಗ ಹಾಗೂ ವನಸಂಪತ್ತು ಇವುಗಳ ಮಧ್ಯೆ ಪ್ರಶಾಂತ ಪರಿಸರದಲ್ಲಿ ಸದಾ ಹರಿಯುವ ಸೌಪರ್ಣಿಕಾನದಿ; ಸಮೀಪದಲ್ಲೇ ಪರಮ ಪಾವನೆ – ನಂಬಿದವರನ್ನು ಸಲಹಿ ಉದ್ಧರಿಸುವ ಮೂಕಾಂಬಿಕೆಯ ಸನ್ನಿಧಿ– ಪುಣ್ಯಕ್ಷೇತ್ರ ಕೊಲ್ಲೂರಿನ ಸೃಷ್ಟಿ ಪರಿಸರ ಇದು. ಕೊಲ್ಲೂರು ಪರಶುರಾಮ ಸೃಷ್ಟಿಯ ಮೋಕ್ಷದಾಯಕ ಸಪ್ತ ಪುಣ್ಯಕ್ಷೇತ್ರಗಳಲ್ಲಿ ಒಂದೆನಿಸಿ ಪ್ರಖ್ಯಾತಿ ಹೊಂದಿದೆ.

ದಕ್ಷಿಣ ಕನ್ನಡದ ಕುಂದಾಪುರ ತಾಲೂಕಿನ ಶಕ್ತಿ ತಾಣ "ಕೊಲ್ಲೂರು" ಮಂಗಳೂರಿನಿಂದ 85 ಮೈಲು ಉತ್ತರದಲ್ಲಿದೆ. ಮಂಗಳೂರಿನಿಂದ ಎಕ್ಸ್‌ಪ್ರೆಸ್ ಬಸ್ ಸೌಲಭ್ಯ ಅಧಿಕವಿದೆ. ಕರ್ನಾಟಕದ ಎಲ್ಲೆಡೆಗಳಿಂದಲ್ಲದೆ ಕೇರಳ, ತಮಿಳ್ನಾಡಿನ ಮದ್ರಾಸಿನಿಂದಲೂ ಕೊಲ್ಲೂರಿಗೆ ದಿನಂಪ್ರತಿ ನೇರ ಬಸ್ ಸೌಲಭ್ಯವಿದೆ. ಕೊಲ್ಲೂರು ಪ್ರಸಿದ್ಧ ಪುಣ್ಯಕ್ಷೇತ್ರ–ಯಾತ್ರಾ ತಾಣವಾಗಿಯೂ; ಪ್ರಕೃತಿ ಪ್ರಿಯರಿಗೆ ವಿಹಾರಧಾಮವಾಗಿಯೂ ಜನಾಕರ್ಷಣೀಯವಾಗಿದೆ. ನಿಸರ್ಗಪ್ರಿಯ ಕಲಾರಸಿಕರನ್ನು "ಕುಟಜಾದ್ರಿ" ಕೈಬೀಸಿ ತನ್ನೆಡೆಗೆ ಆಹ್ವಾನಿಸುತ್ತದೆ. ಪರ್ವತಾರೋಹಿ ಸಾಹಸಿಗಳಿಗೆ "ಕುಟಜಾದ್ರಿ" ಅದ್ಭುತ ಸೃಷ್ಟಿ ಸೌಂದರ್ಯದ ಅನುಭವ ಒದಗಿಸುತ್ತದೆ

ಪರಮ ಪಾವನ ಪುಣ್ಯಕ್ಷೇತ್ರ ಕೊಲ್ಲೂರು ತನ್ನದೇ ಪುರಾಣಕಥೆ; ಇತಿಹಾಸಗಳನ್ನು ಹೊಂದಿದೆ. ಸ್ಕಾಂದಪುರಾಣದ ಆಧಾರದಂತೆ ಕೃತಯುಗದಲ್ಲಿ ದುಷ್ಟ ಕಂಸಾಸುರನು ದೇವೀ ಶಾಪದಿಂದ ಮೂಕನಾದ. ದೇವತೆ ಹಾಗೂ ಮಹರ್ಷಿಗಳು ಅವನ ಉಪಟಳ ತಾಳಲಾರದೆ ಆದಿಶಕ್ತಿಯಲ್ಲಿ ಮೊರೆಯಿಡಲು ಆಕೆ ಕೋಲ ಮಹರ್ಷಿಗೆ ಪ್ರಸನ್ನಳಾಗಿ ಮೂಕಾಸುರನನ್ನು ಹತಗೈದಳು. ಮೂಕಾಸುರನು ಹತನಾದ ಸ್ಥಳವೇ ಹತ್ತು ಮೈಲಿ ಅಂತರದಲ್ಲಿರುವ ಇಂದಿನ ಮಾರಣಕಟ್ಟೆ. ಕೋಲ ಮಹರ್ಷಿಯ ತಪೋಭೂಮಿಯಾದ ಅಂದಿನ ಕೋಲಾಪುರವೇ ಇಂದು ಕೊಲ್ಲೂರು ಆಗಿ ಪರಿವರ್ತಿತಗೊಂಡಿದೆ. ಮೂಕಾಸುರನನ್ನು ಸಂಹರಿಸಿ ಲೋಕ ಸಂರಕ್ಷಿಸಿದ ತಾಯಿ "ಮೂಕಾಂಬಿಕೆ" ಯೆನಿಸಿ ಕೊಲ್ಲೂರಲ್ಲಿ ನೆಲೆಸಿ ಭಕ್ತರಿಂದ ಸಂಪೂಜಿಸಲ್ಪಡುತ್ತಿದ್ದಾಳೆ. ಮಹರ್ಷಿಗಳ ಕೋರಿಕೆಯಂತೆ ಮೂಕಾಂಬಿಕೆ ತೇಜೋಮಯ ಜ್ಯೋತಿರ್ಲಿಂಗದಲ್ಲಿ ಐಕ್ಯಳಾಗಿದ್ದು ಇಂದಿಗೂ ಭಕ್ತರನ್ನು ಸಲಹುತ್ತಿರುವುದಾಗಿ ನಂಬಿಕೆ. ಶಂಕರಾಚಾರ್ಯರ "ಶಂಕರ ದಿಗ್ವಿಜಯ"ದ ಉಲ್ಲೇಖದಂತೆ ಅವರು ತಮ್ಮ ದಿಗ್ವಿಜಯ ಯಾತ್ರೆಯಲ್ಲಿ ಕುಟಜಾದ್ರಿಯ ಕೊಲ್ಲೂರು ಮೂಕಾಂಬಿಕೆಯನ್ನು ಸಂದರ್ಶಿಸಿದ್ದರು. ಅವರು ಮೃತ ಶಿಶುವೊಂದನ್ನು ಮೂಕಾಂಬಿಕೆಯೆದುರು ತಂದಿರಿಸಿ ಬದುಕಿಸಲು ಪ್ರಾರ್ಥಿಸಿದಾಗ ಪ್ರಸನ್ನಳಾದ ಮೂಕಾಂಬಿಕೆ ಶಿಶುವನ್ನು ಬದುಕಿಸಿದ ಬಗೆಗೆ ಉಲ್ಲೇಖವಿದೆ.

ಕೊಲ್ಲೂರು ಮೂಕಾಂಬಿಕಾ ದೇವಾಲಯ ದಿನದಿನಕ್ಕೆ ಅಭಿವೃದ್ಧಿ ಹೊಂದಿ ಬೆಳಗುತ್ತಿದೆ. ಶಂಕರಾಚಾರ್ಯರಿಂದ ಪ್ರತಿಷ್ಠಾಪಿತವಾದ ಪ್ರಸನ್ನಳಾದ ಶ್ರೀ ಮೂಕಾಂಬಿಕೆಯ ಪಂಚಲೋಹದ ವಿಗ್ರಹವೂ ಜ್ಯೋತಿರ್ಲಿಂಗದ ಹಿಂಬದಿಯಲ್ಲಿದೆ. ಶಂಖ ಚಕ್ರ ಆಯುಧಧಾರಿಯಾಗಿರುವ 2½ ಅಡಿ ಎತ್ತರದ ವಿಗ್ರಹ ಅಭಯ, ವರದ ಮುದ್ರಾಂಕಿತವಿದೆ. ದೇವಾಲಯದ ಕಟ್ಟಡ ಕೆಳದಿಯ ಕಾಲದ್ದಾಗಿದ್ದು. ಕೆಳದಿಯ ನಾಯಕರ ಅಧಿದೇವತೆಯ ದೇವಾಲಯ ವಿಶಾಲ ಕಗ್ಗಲ್ಲಿನಿಂದ ನಿರ್ಮಿತ. ತಾಯಿ ಮೂಕಾಂಬಿಕೆಗೆ ದಿನವೂ ದಾಕ್ಷಿಣಾತ್ಯ ವೈದಿಕ ಸಂಪ್ರದಾಯಾನುಸಾರ ಪೂಜಾ ಕೈಂಕರ್ಯಗಳು ಸಲ್ಲುತ್ತವೆ. ವಜ್ರ; ವೈಢೂರ್ಯ; ರತ್ನಾಭರಣಗಳನ್ನು ಮಹಾಪೂಜೆಯ ಸಂದರ್ಭಗಳಲ್ಲಿ ತೊಡಿಸುವರು. ಶುಕ್ರವಾರ, ನವರಾತ್ರಿ, ಉತ್ಸವ ವಿಶೇಷ ದಿನಗಳಲ್ಲಿ ಮೂಕಾಂಬಿಕೆಯನ್ನು ವಿಶೇಷ ಅಲಂಕಾರಗಳಿಂದ ಶೋಭಾಯಮಾನಗೊಳಿಸುವರು.

**ಶ್ರೀ ಎಸ್. ತಂತ್ರಿ**

ದೇವಾಲಯದ ಮುಂಭಾಗದಲ್ಲಿ ಬೃಹತ್ ದೀಪಸ್ತಂಭ, ಎಡಬದಿಯಲ್ಲಿ ಸುಬ್ರಹ್ಮಣ್ಯ ಗುಡಿ; ಬಲಬದಿಯಲ್ಲಿ ವೀರಭದ್ರಗುಡಿ; ಪ್ರದಕ್ಷಿಣಾಕಾರವಾಗಿ ಸುತ್ತುವರಿದಾಗ ಸರಸ್ವತಿ ಮಂಟಪ; ನಂತರ ಕ್ರಮವಾಗಿ ಗಣಪತಿ; ಪ್ರಾಣೇಶ್ವರ; ಚಂದ್ರೇಶ್ವರ; ವೃಂದಾವನ; ಗೋಪಾಲಕೃಷ್ಣ; ಮುಖ್ಯಪ್ರಾಣ ದೇವರ ಗುಡಿಗಳಿವೆ. ದೇಗುಲದ ತುತ್ತತುದಿಯ ಕಳಸ ಸುವರ್ಣಮಯ. ದೇವಾಲಯದಲ್ಲಿ ಪಡುವಣ ದಿಕ್ಕಿಗಭಿಮುಖವಾಗಿ ಆದಿ ಶಂಕರರು ಧ್ಯಾನಮಗ್ನರಾಗಿದ್ದ ಪೀಠವೆಂದು ಪ್ರಸಿದ್ಧವಾದ "ಶಂಕರ ಸಿಂಹಾಸನ" ವಿದೆ. ಸ್ವತಃ ಶಂಕರರೇ ಮೂಕಾಂಬಿಕೆಯನ್ನು ಆರಾಧಿಸಿ; ಪೂಜಿಸಿ ಶ್ರೀ ಚಕ್ರವನ್ನು ಪ್ರತಿಷ್ಠಾಪಿಸಿದರೆಂದು ಪ್ರತೀತಿ. ಸರ್ವಾಭರಣ ಭೂಷಿತಳಾಗಿ ಪದ್ಮಾಸನಸ್ಥೆಯಾಗಿ ಕಂಗೊಳಿಸುವ ಅಭಯ ಪ್ರದಾಯಿನಿ ದಿವ್ಯ ಸ್ವರೂಪಿಣಿ ಸರ್ವಮಂಗಳೆ ಆದಿಲಕ್ಷ್ಮಿಯ ಅಂಶಳೆಂದೂ ಭಕ್ತರಿಂದ ಪೂಜಿಸಲ್ಪಡುತ್ತಾಳೆ.

ನವರಾತ್ರಿಯ ಪರ್ವದಿನಗಳು, ಫಾಲ್ಗುಣ ಬಹುಳ ಸಪ್ತಮಿಯಂದು ಜರುಗುವ ವಾರ್ಷಿಕ ರಥೋತ್ಸವ ಸಂದರ್ಭಗಳಲ್ಲಿ ಕ್ಷೇತ್ರಕ್ಕೆ ಸಮಾಗಮಿಸುವ ಯಾತ್ರಿಕರ ಸಂಖ್ಯೆ ಅಧಿಕ. ಫಾಲ್ಗುಣ ಶುಕ್ಲ ಉತ್ತರಾ ನಕ್ಷತ್ರದಿಂದ ಮೂಲಾನಕ್ಷತ್ರದ ವರೆಗಿನ ಒಂಬತ್ತು ದಿನಗಳು ವೈಭವದ ವಾರ್ಷಿಕೋತ್ಸವ ನಡೆಯುತ್ತದೆ. ಮೂಕಾಂಬಿಕೆ ಕನ್ನಡಿಗರಿಗಷ್ಟೇ ಸೀಮಿತವಾಗಿಲ್ಲ, ಹೊರನಾಡಿಗರಿಗೂ ಆರಾಧ್ಯ ದೇವತೆ. ವಿಶೇಷವಾಗಿ ಕೇರಳ ತಮಿಳ್ನಾಡಿಗರ ಕುಲದೇವತೆಯೆನಿಸಿದ್ದಾಳೆ. ಅವರು ಅಧಿಕ ಸಂಖ್ಯೆಯಲ್ಲಿ ಕ್ಷೇತ್ರಕ್ಕಾಗಮಿಸಿ ಸೌಪರ್ಣಿಕೆಯಲ್ಲಿ ಮಿಂದು ಶುಚಿರ್ಭೂತರಾಗಿ ಒಂದೆರಡು ದಿನ ಸತ್ರಗಳಲ್ಲಿ ತಂಗಿ ಮೂಕಾಂಬಿಕೆಯ ಆರಾಧನೆಯಲ್ಲಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಪರ್ಚನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ತನ್ಮಯರಾಗಿ, ಭಕ್ತಿ ಭಾವದಲ್ಲಿ ಮೈಮರೆತು ಪುಣ್ಯ ಭಾಜನರಾಗಿ ಮರಳುತ್ತಾರೆ. ಪ್ರಸಿದ್ಧ ಹಿನ್ನೆಲೆಗಾಯಕ ಏಸುದಾಸ್, ತಮಿಳ್ನಾಡು ಮುಖ್ಯಮಂತ್ರಿ ಎಂ. ಜಿ. ಆರ್, ಮುಂತಾದವರನೇಕರ ಆರಾಧ್ಯ ಮೂರ್ತಿಯಾಗಿ ಭಕ್ತರನ್ನು ಪ್ರತಿವರ್ಷವೂ ತನ್ನೆಡೆಗೆ ಬರಮಾಡಿಕೊಳ್ಳುತ್ತಿದ್ದಾಳೆ. ಎಂ. ಜಿ ಆರ್. ಅರ್ಪಿಸಿದ ಚಿನ್ನದ ಖಡ್ಗ ಮೂಕಾಂಬಿಕೆಯ ಆಭರಣಗಳಲ್ಲೊಂದೆನಿಸಿದೆ.

ಕೊಲ್ಲೂರಿನಲ್ಲಿ ವಿದ್ಯಾ ಮಂದಿರಗಳ ಸಂಸ್ಕೃತ ಪಾಠಶಾಲೆ, ಯೋಗಾಶ್ರಮ, ಅತಿಥಿಗೃಹ, ಕಲ್ಯಾಣಮಂಟಪ, ಕ್ಯಾಂಟೀನ್, ಯಾತ್ರಾರ್ಥಿಗಳಿಗೆ ಉಚಿತ ಭೋಜನ ವ್ಯವಸ್ಥೆ, ಧಾರ್ಮಿಕ ಕಾರ್ಯಗಳಿಗೆ ಕ್ಷೇತ್ರ ಪುರೋಹಿತರು, ಪ್ರಕೃತಿ ಪ್ರಿಯರಿಗೆ ಪ್ರೇಕ್ಷಣೀಯ ವಿಹಾರ ತಾಣಗಳು, ಕೊಡಚಾದ್ರಿಯಲ್ಲಿ ದಿವ್ಯೌಷಧ ಗಿಡಮೂಲಿಕೆಗಳು ಮೈಮನಗಳಿಗೆ ಮುದ ನೀಡುವ ಪ್ರಶಾಂ ಸುಂದರ ಪರಿಸರ–ಎಲ್ಲವೂ ಒಂದೆಡೆ ಕೇಂದ್ರೀಕರಿಸಿದೆ. ಸುವ್ಯವಸ್ಥಿತ ಬಸ್‌ನಿಲ್ದಾಣ. ಪ್ರಯಾಣಿಕರ ತಂಗುದಾಣ ಅವಶ ನಿರ್ಮಾಣವಾಗಬೇಕಾಗಿದೆ. ದೂರ ಯಾತ್ರಾ ಪ್ರವಾಸಿಗಳಿಗೆ ಸರ್ವ ಸುಸಜ್ಜಿ ವಸತಿ ವ್ಯವಸ್ಥೆ, ಮಾರ್ಗದರ್ಶನ ದೊರೆಯು ವಂತಾಗಬೇಕು. ಎಲ್ಲೆಡೆಗಳಿಂದ ವಾಹ ಸೌಲಭ್ಯಗಳನ್ನು ಹೆಚ್ಚಿಸಿ ಕೊಳ್ಳುತ ಯಾತ್ರಾರ್ಥಿಗಳನ್ನು ಅಧಿಕ ಸಂಖ್ಯೆಯ ಆಕರ್ಷಿಸುತ್ತಿರುವ ಕೊಲ್ಲೂರು ಸುಂದ ಪ್ರಶಾಂತ ಪರಿಸರದ ವಿಶಿಷ್ಟ ಶಕ್ತಿ ಕ್ಷೇತ್ರ ವೆನಿಸಿದೆ.



# ಐರಾವತ ನೋಂಪಿ - ಕಾವ್ಯ ಪರಿಚಯ

ಕನ್ನಡ ಸಾಹಿತ್ಯದ ನೋಂಪಿಯ ಕಾವ್ಯಗಳಿಗೆ ಶಿಷ್ಟ ಸ್ಥಾನವಿದೆ. ಜೈನ ಸಾಹಿತ್ಯದಲ್ಲಿ ಜೀವದಯಾಷ್ಟ ನೋಂಪಿ, ವೀರಶೈವ ಸಾಹಿತ್ಯದಲ್ಲಿ ಕಥ ನೋಂಪಿ—ಈ ಕೃತಿಗಳನ್ನು ವ್ರತ ಪ್ರಸಂಗಕ್ಕೆ ತಕ್ಕಂತೆ ಬರೆಯಲಾಗಿದೆ. ಅದೇ ರೀತಿ ವೈದಿಕ ಸಾಹಿತ್ಯದಲ್ಲಿಯೂ 'ಐರಾವತನೋಂಪಿ'—ವ್ರತ ಪ್ರಸಂಗಕ್ಕೆ ಬರೆದ ಕೃತಿ.

ಕಲ್ಪೋಕ್ತ ಪ್ರಕಾರದಲ್ಲಿ ಮಾಡುವ ಗೌರಿ ಪೂಜೆಗಳಲ್ಲಿ ಗಜಗೌರಿ ಪೂಜೆಯೂ ಒಂದು. ಸ್ಕಾಂದ ಪುರಾಣದ ಗೌರೀ ಖಂಡದಲ್ಲಿ ಮಾರ್ಕಂಡೇಯ ಮುನಿ ಯುಧಿಷ್ಠಿರನಿಗೆ ಹೇಳಿದ ಅನೇಕ ವ್ರತಕಥೆಗಳಲ್ಲಿ ಗಜಗೌರಿ ವ್ರತದ ಬಗ್ಗೆಯೂ ಹೇಳಲಾಗಿದೆ.

ಗಜಗೌರ್ಯಾಃ ವ್ರತಂಕಾರ್ಯಂ
ಮಕರಸ್ಥೇ ದಿವಾಕರೇ ।
ತತ್ರ ಪ್ರತಿಪದ್ಯುಷಸಿ
ವಾಯಸ ಧ್ವಾನಮಶ್ರುತಾಃ ॥

ಅಂದರೆ ಸೂರ್ಯನು ಮಕರ ರಾಶಿ ಪ್ರವೇಶಿಸಿದ ದಿನ ರಾತ್ರಿ ಕಾಗೆ ಕೂಗುವುದಕ್ಕೆ ಮೊದಲು, ಬೆಳಗಿನ ಜಾವದಲ್ಲಿ ಈ ವ್ರತವನ್ನು ಆಚರಿಸಬೇಕು. ಮುಂದುವರಿದು ಗಜ ರಚನೆಯ ವಿಚಾರವನ್ನೂ ಹೇಳಲಾಗಿದೆ. ಕುಂಬಾರನ ಮನೆಗೆ ಹೋಗಿ, ಚಕ್ರದ ಮೇಲಿರುವ ಮಣ್ಣನ್ನು ತಂದು ಗಜ ಗೌರಿಯನ್ನು ಮಾಡಿ ಒಂಬತ್ತು ದಿನ ಪೂಜಿಸಬೇಕು. ಒಂಬತ್ತು ಗಂಟಿನ ದಾರವನ್ನು ಕೈಗೆ ಕಟ್ಟಿಕೊಳ್ಳಬೇಕು. ಒಂಬತ್ತು ವರ್ಷ ಈ ವ್ರತಮಾಡಿ ಉದ್ಯಾಪನೆ ಮಾಡಬೇಕು. ಇದೇ ಪುರಾಣದಲ್ಲಿ ಗಜಗೌರಿಯ ರೂಪವನ್ನು ಹೇಳಿದೆ:

ಚತುರ್ಭುಜಾಂ ತ್ರಿಣೇತ್ರಾಂ ಚ
ಶೂಲಂ ಡಮರುಕಂ ತಥಾ ।
ಕಪಾಲ ಖಡ್ಗ ಸಂಯುಕ್ತಾಂ
ಗೌರೀಂ ಧ್ಯಾಯೇತ್ ಪರಾತ್ಪರಾಮ್ ॥

ಕನ್ನಡದ "ಐರಾವತನೋಂಪಿ"—ಕಾವ್ಯವನ್ನು ಗದುಗಿನ ವೀರನಾರಾಯಣನ ಅಂಕಿತದಲ್ಲಿ ಬರೆಯಲಾಗಿದೆ. ಇದು ಕುಮಾರವ್ಯಾಸನ ಕೃತಿಯೇ ಇರಬೇಕು ಎನ್ನಿಸುತ್ತದೆ. ಕರ್ನಾಟಕದ ಹಬ್ಬ, ಶಿಲ್ಪ, ಪೂಜೆಗಳ ರೂಪದಲ್ಲಿ ಕನ್ನಡಿಗರ ಬದುಕನ್ನು ವ್ಯಾಪಿಸಿದ ಈ ಗಜಗೌರಿ ಕಥೆ ಕವಿ ಕುಮಾರವ್ಯಾಸನನ್ನು ವಿಶೇಷವಾಗಿ ಆಕರ್ಷಿಸಿ, ಆತನ ಕಾವ್ಯದಲ್ಲಿ ಎಡೆಪಡೆದಿರುವುದು ಸಹಜವಾಗಿದೆ. ಐರಾವತ ನೋಂಪಿ ಮೊದಲಿನಿಂದಲೂ ಜನತೆಯಲ್ಲಿ ಅಧಿಕ ಪ್ರಚಾರ ಪಡೆದಂತೆ ತೋರುತ್ತದೆ. ವಿಪುಲ ಸಂಖ್ಯೆಯ ಹಸ್ತ ಪ್ರತಿಗಳು ಸಿಗುವುದೂ, ಪಾಠ ದೃಷ್ಟಿಯಿಂದ ಹಸ್ತ ಪ್ರತಿಗಳು ಒಂದರಿಂದ ಇನ್ನೊಂದು ತೀರ ಭಿನ್ನವಾಗಿರುವುದೂ ಇದಕ್ಕೆ ನಿದರ್ಶನ (ಆರ್.ಸಿ. ಹಿರೇಮಠ್ – ಮುನ್ನುಡಿ – ಐರಾವತ ನೋಂಪಿ.)

ಕುಮಾರವ್ಯಾಸ ಭಾಗವತ ಕವಿ. ಅವನು ಭಾರತ ಕಥಾ ಮಂಜರಿಯನ್ನು ಬರೆದಿರುವುದೇ ಶ್ರೀಕೃಷ್ಣನ ಮಹಿಮೆಯನ್ನು ಹೊಗಳುವುದಕ್ಕಾಗಿ; ಅವನ ಲೀಲೆಗಳನ್ನು ಕೊಂಡಾಡುವುದಕ್ಕಾಗಿ. ಅವನ ದೃಷ್ಟಿಯಲ್ಲಿ ಕೃಷ್ಣ ಅಜಾತ ಶತ್ರು. ಆದ್ದರಿಂದ ಬಾಹ್ಯ ವರ್ತನೆಯಲ್ಲಿ ಶತ್ರುಗಳಂತೆ ವರ್ತಿಸುತ್ತಿರುವವರೂ ಸಹ ಅಂತರ್ಯದಲ್ಲಿ ಕೃಷ್ಣನ ಭಕ್ತರಾಗಿರುತ್ತಾರೆ—ಎಂಬುದನ್ನು ತೋರಿಸುವುದೇ ಅವನ ಕಾವ್ಯದ ಪ್ರವೃತ್ತಿ.

ಸಂಧಾನ ವಿಫಲವಾದಾಗ ದುರ್ಯೋಧನ ಕೃಷ್ಣನನ್ನು ಕಟ್ಟಿ ಹಾಕಲು ಪ್ರಯತ್ನಿಸುತ್ತಾನೆ, ಆಗ ಧೃತರಾಷ್ಟ್ರ, ದುರ್ಯೋಧನನಿಗೆ—"ಮರುಳತನವಿದು ಬೇಡ, ಖುಲ್ಲರ ನೆರವಿಯೊಳಗಾಡಿದರೆ ತಪ್ಪದು ನರಕ" ಎನ್ನುತ್ತಾನೆ. ಆದಕ್ಕೆ, ಕುಮಾರವ್ಯಾಸ, ದುರ್ಯೋಧನನಿಂದ – "ಈತನಂತರ್ಯಾಮಿ ಜೀವವ್ರಾತದಲಿ ಜನಜನಿತವಿದು, ಜಗದೀಶನಾಜ್ಞೆಯೊಳೊಲೆವುದು" ಎಂದು ಹೇಳುತ್ತಾನೆ. ಮತ್ತೊಂದು ಸಂದರ್ಭ ಭೀಮನ ಗದೆಯ ಏಟಿನಿಂದ ತೊಡೆ ಮುರಿದು, ದುರ್ಯೋಧನ ನೆಲಕ್ಕೆ ಉರುಳುತ್ತಾನೆ. ಆಗ ಕೃಷ್ಣ ಅವನ ಸಮೀಪಕ್ಕೆ ಬರುತ್ತಾನೆ. ಆಗ ದುರ್ಯೋಧನ—"ಬಣಗುಗಳು ಭೀಮಾರ್ಜುನರು, ಕಾರುಣಿಕ ನೀ, ನಡುವಾಯಿ ಧರ್ಮದ ಕಣ, ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ ॥ ಸೆಣಸನಿಕ್ಕಿದೆ ನಮ್ಮೊಳಗೆ ಧಾರುಣಿಯ ಭಾರವ ಬಿಡಿಸಲೋಸುಗ, ರಣವ ಹೊತ್ತಿಸಿ ನಮ್ಮ ಬೇಂಟೆಯನಾಡಿಸಿದೆ" ಎನ್ನುತ್ತಾನೆ. ಇದೇ ಭಾವವೇ 'ಐರಾವತನೋಂಪಿ' – ಕಾವ್ಯದ ದುರ್ಯೋಧನನಿಂದಲೂ ವ್ಯಕ್ತವಾಗಿದೆ. ಇಂದ್ರನ ಐರಾವತವನ್ನೇರಿ, ಕುಂತಿ, ಹಸ್ತಿನಾಪುರದಲ್ಲಿ ದುರ್ಯೋಧನನ ಅರಮನೆಯ ಮುಂದೆ ಬರುತ್ತಿರುತ್ತಾಳೆ: ಆಗ ಆ ಉತ್ಸವದೊಡನೆ ಬರುತ್ತಿದ್ದ ಕೃಷ್ಣನನ್ನು ದುರ್ಯೋಧನ ನೋಡುತ್ತಾನೆ. ಕೃಷ್ಣನನ್ನು ಕಂಡಾಗ ಅವನ ಮನಸ್ಸಿನಲ್ಲಿ – ನಮ್ಮ ಮನಸಿನಲೊಂದ ಹುಟ್ಟಿಸಿ, ಬೊಮ್ಮನೀ ಪಾಂಡವ ಕುಮಾರರ ಹೆಮ್ಮೆಯನು ಮೆರೆಸುವನು, ನೆರೆ ಮಾಡಿದನೆ ಕೌತುಕವ. ಎಮ್ಮವರ ಪಾಡೇನು, ತನ್ನಯ ಸೊಮ್ಮಿನಲಿ ನವ ಪಂಚಭವನವನೊಮ್ಮೆ ಕುಣಿಸುವನೀ ಮುಕುಂದನ ಮಹಿಮೆ ಘನ". ಎಂದುಕೊಳ್ಳುತ್ತಾನೆ. ಹೀಗೆಂದುಕೊಂಡು, ಅರಮನೆಯಿಂದ ಇಳಿದು ಬಂದು ಕೃಷ್ಣನ ಚಾರು ಚರಣಾಂಬುಜಕ್ಕೆ ನಮಸ್ಕರಿಸುತ್ತಾನೆ.

ಶ್ರೀಕೃಷ್ಣನ ಪಾರಮ್ಯ, ಪದ ಪ್ರಯೋಗ, ವಿಷಯ ನಿರೂಪಣೆ, ಅಲಂಕಾರಿಕ ಶೈಲಿ—ಇವುಗಳನ್ನು ಗಮನಿಸಿದಾಗ ಈ ಕಾವ್ಯ ಕುಮಾರವ್ಯಾಸನಿಂದ ರಚಿತವಾದದ್ದೇ ಇರಬೇಕು ಎನ್ನಿಸುತ್ತದೆ

'ಐರಾವತನೋಂಪಿ'-ಕಾವ್ಯದ ಕಥಾ ವಸ್ತುವನ್ನು ನೋಡೋಣ. ಸ್ಕಾಂದಪುರಾಣದ ಗಜಗೌರಿ ವ್ರತದ ಕಥೆಗೂ, 'ಐರಾವತನೋಂಪಿ' ಕಾವ್ಯದ ಕಥೆಗೂ ಏನೇನೂ ಸಂಬಂಧವಿಲ್ಲ. ಸ್ಕಾಂದ ಪುರಾಣದ ಕಥೆಯಲ್ಲಿ ವ್ರತದ ನಿಷ್ಠೆಗೆ ಪ್ರಧಾನತೆ ಇದ್ದರೆ, ಕಾವ್ಯದ ಕಥೆಯಲ್ಲಿ ಗಾಂಧಾರಿ ಮತ್ತು ಕುಂತಿ—ಇವರಿಬ್ಬರು ಗಜಗೌರಿ ವ್ರತವನ್ನು ಆಚರಿಸಿದ ರೀತಿಯ ನಿರೂಪಣೆ ಮುಖ್ಯವಾಗಿದೆ.

ಒಂದು ದಿನ ವೇದವ್ಯಾಸರು ಹಸ್ತಿನಾಪುರಕ್ಕೆ ಬರುತ್ತಾರೆ. ಅರಮನೆಗೆ ಬಂದ ಅವರನ್ನು ಧೃತರಾಷ್ಟ್ರಗಾಂಧಾರಿಯರು ಅರ್ಘ್ಯಪಾದ್ಯಗಳಿಂದ ಗೌರವಿಸಿ, ಕುಳ್ಳಿರಿಸುತ್ತಾರೆ. ಆಥಿತ್ಯಾನಂತರ, ವ್ಯಾಸರು, ಎಲ್ಲರ ಕುಶಲವನ್ನೂ ಕೇಳಿ, 'ಐರಾವತ ನೋಂಪಿ'—ಎಂಬ ವ್ರತವಿದೆ. ಅದನ್ನು ಯಾರು ಬೇಕಾದರೂ ಮಾಡಬಹುದು. ಅದನ್ನು ಮಾಡುವುದರಿಂದ "ಸಿರಿಯಹುದು, ಮುತ್ತೈದೆತನ ಸೌಭಾಗ್ಯ ಹಿರಿದಹುದು" ಎಂದು ಹೇಳುತ್ತಾರೆ. ಮುಂದುವರಿದು, —ಇದು ಹೆಂಗಸರು ಕೇವಲ ಮೋಕ್ಷಾಪೇಕ್ಷಿಗಳಾಗಿ ಮಾಡುವ ವ್ರತ—ಎಂಬ ಭಾವನೆ ಬರಬಾರದು ಎಂದು ಯೋಚಿಸಿ, ಧೃತರಾಷ್ಟ್ರನನ್ನು ಕುರಿತು—"ಶತ್ರುಗಳ ಕ್ಷಯವಹುದು ಧಾತ್ರಿಯನೊತ್ತಿಯಾಳ್ವಿರಿ, ಸಕಲ ನೃಪಜನ ಮಿತ್ರರಹರು, ಸಮಸ್ತ ಮನದಿಷ್ಟಗಳು ಸಿದ್ಧಿ ಪುವು, ಪುತ್ರ ಪೌತ್ರಾದಿಗಳ ಸಂತತಿಯರ್ತಿಯಲಿ ಪೆಚ್ಚುವುದು, ಭೂಪತಿ, ಚಿತ್ತಯಿಸು, ಗಾಂಧಾರಿಗೈರಾವತವ ನೋನಿವುದು" ಎನ್ನುತ್ತಾರೆ.

**ಕೂಡಲಿ ಜಗನ್ನಾಥಶಾಸ್ತ್ರಿ**

ಇದನ್ನು ಕೇಳಿದ ಗಾಂಧಾರಿಗೆ ಕುತೂಹಲ ಉಂಟಾಗಿ, "ಈ ವ್ರತವನ್ನು ಮಾಡಿಯೇ ಮಾಡುತ್ತೇನೆ" ಎಂದು ನಿಶ್ಚಯಿಸಿ, "ಇದನ್ನು ಹೇಗೆ ಮಾಡಬೇಕು?" ಎಂದು ಪ್ರಶ್ನಿಸುತ್ತಾಳೆ. ವ್ಯಾಸರು "ನಿನ್ನ ಮಕ್ಕಳಿಂದ ಮಣ್ಣನ್ನು ತರಿಸು. ಅದರಿಂದ ಐರಾವತವನ್ನು ಮಾಡಿಸಿ, ಪೂಜಿಸು. ಭೂಸುರರನ್ನು ದಾನಗಳಿಂದ ಸಂತೋಷಪಡಿಸು" ಎಂದು ಹೇಳುತ್ತಾರೆ.

ಗಾಂಧಾರಿ, ಬೇಡಿಕೆಯನ್ನು ಮಕ್ಕಳ ಮುಂದಿಡುತ್ತಾಳೆ. ತಕ್ಷಣವೇ ಆ ನೂರು ಮಂದಿಯೂ, ಮೃತ್ತಿಕೆಯ ಬೆಟ್ಟವನ್ನೇ ತಂದಿಡುತ್ತಾರೆ. ಶಿಲ್ಪಿಗಳಿಂದ ಅದ್ಭುತವಾದ ಐರಾವತವನ್ನು ರಚಿಸುತ್ತಾರೆ. ಗಾಂಧಾರಿ ಸಂಭ್ರಮದಿಂದ ಪೂಜೆಗೆ ಸಿದ್ಧತೆಗಳನ್ನು ನಡೆಸುತ್ತಾಳೆ. ಅರಮನೆಯ ನಾರಿಯರನ್ನು, ಕೆಳದಿಯರನ್ನು, ಪುರಜನರ ಸತಿಯರನ್ನು, ವರ ಗಣಿಕೆಯರನ್ನು ಆಹ್ವಾನವಿತ್ತು ಕರೆಸುತ್ತಾಳೆ. ಅವರೆಲ್ಲರೂ ಸಾಲಂಕೃತರಾಗಿ ಬರುತ್ತಾರೆ. ಗಾಂಧಾರಿ ನೆನೆಗಡಲೆ, ಮೊರ, ಬಿಚ್ಚೋಲೆ, ಬಣ್ಣದ ಹಂಗು ನೂಲು—ಮುಂತಾದ ಪೂಜಾವಸ್ತುಗಳೊಂದಿಗೆ, ವಾದ್ಯ ಸಮೇತ, ಸುರಗಜವನ್ನು ಪೂಜಿಸಲು ಹೊರಡುತ್ತಾಳೆ. ಐರಾವತದ ಬಳಿ ಬಂದು, ಹಡಿಗೆಗಳಲ್ಲಿ ಸುವರ್ಣಪುಷ್ಪವನ್ನು ಗಜದ ಮೇಲೆ ಸುರಿಯುತ್ತಾಳೆ; ಬಲವಂದು ಮೈಯಿಕ್ಕುತ್ತಾಳೆ. ಅಲ್ಲಿಂದ ಗಂಗಾನದಿಯ ಬಳಿಗೆ ಬಂದು ಮರಳ ಗೌರಿಯನ್ನು ಮಾಡಿ ಪೂಜಿಸುತ್ತಾಳೆ. (ಪುರಾಣೋಕ್ತ ಪೂಜಾಕ್ರಮಕ್ಕೂ ಈ ಕಾವ್ಯದಲ್ಲಿ ಹೇಳುವ ಪೂಜಾಕ್ರಮಕ್ಕೂ ವ್ಯತ್ಯಾಸವಿದೆ. ಕಾವ್ಯದಲ್ಲಿ ಮೊದಲು ಗಜವನ್ನು ಪೂಜಿಸಿ ಅನಂತರ ಗಂಗೆಯ ಬಳಿ ಬಂದು ಮರಳ ಗೌರಿಯನ್ನು ಪೂಜಿಸಿದಂತೆ ಹೇಳಿದೆ. ಮುಂದೆ ಕುಂತಿಯೂ ಹೀಗೆಯೇ ಪೂಜಿಸುತ್ತಾಳೆ. ಪುರಾಣದ ಪ್ರಕಾರ ಗಜಗೌರಿ – ಎಂಬುದು ಪಾರ್ವತಿಯ ಒಂದು ರೂಪದ ಹೆಸರು.) ಅನಂತರ ಬಗೆಬಗೆಯ ದಾನಗಳಿಂದ ವಿಪ್ರರನ್ನೂ, ವಿವಿಧ ಭಾಗಿನಗಳಿಂದ ಸುಮಂಗಲಿಯರನ್ನೂ ತೃಪ್ತಿಪಡಿಸಿ, ಅರಮನೆಗೆ ಹಿಂತಿರುಗುತ್ತಾಳೆ. ಈ ಸಂಭ್ರಮದಲ್ಲಿ, ಹಸ್ತಿನಾವತಿಗೆ ಹತ್ತಿರದಲ್ಲಿದ್ದ ಇಂದ್ರಪ್ರಸ್ಥ ನಗರದಲ್ಲಿ ವಾಸಿಸುತ್ತಿದ್ದ ಕುಂತಿಗೆ ಆಹ್ವಾನ ಕಳಿಸುವುದನ್ನೇ, ಗಾಂಧಾರಿ, ಮರೆತು ಬಿಡುತ್ತಾಳೆ.

ಕುಂತಿಗೆ. ಗಾಂಧಾರಿ, ಐರಾವತವನು ಪೂಜಿಸುವ ವಿಷಯ ಗೊತ್ತಾಗಿತ್ತು. ಆದ್ದರಿಂದ ಅವಳು, ತನ್ನ ಅಂತಃಪುರದಲ್ಲಿ, ಗಾಂಧಾರಿಯ ಆಹ್ವಾನವನ್ನು ನಿರೀಕ್ಷಿಸುತ್ತಾ ಕುಳಿತಿದ್ದಾಳೆ ಬಾಗಿಲಲ್ಲೇ ಇದ್ದ ಅವಳಿಗೆ, ಪೂಜೆ ಮುಗಿಸಿಕೊಂಡು ದಾನವಸ್ತುಗಳೊಂದಿಗೆ, ಹಸ್ತಿನಾವತಿಯಿಂದ ಹಿಂತಿರುಗಿ ಬರುತ್ತಿದ್ದ ಜನರ ಸಮೂಹ ಕಾಣಿಸುತ್ತದೆ. ಒಬ್ಬೊಬ್ಬರನ್ನೂ ಕರೆದು ಕೇಳುತ್ತಾಳೆ. ಅವರೆಲ್ಲರೂ "ಆಗಳೆ ಅರಸಿ ನೋಂತಳು, ತಿರುಗಿದಳು ರಾಜಮಂದಿರಕೆ" ಎಂದು ಉತ್ತರಿಸುತ್ತಾರೆ. ಆ ಮಾತನ್ನು ಕೇಳಿ, ಅವಳಿಗೆ ತುಂಬ ಸಂಕಟವಾಗುತ್ತದೆ. ತಾನು ಬಡತನದಲ್ಲಿರುವುದರಿಂದ, ಗಾಂಧಾರಿ, ಆಹ್ವಾನಿಸಲಿಲ್ಲ – ಎಂದು ಭಾವಿಸಿ "ಬೆಂದುದೀ ಬಡತನವು, ರಾಯನ ಹಿಂದೆ ಹೋಗದೆ ಉಳಿದೆನೇತಕೆ, ಅಕಟ" ಎಂದು ದುಃಖಿಸಿ, ಮಲಗಿಬಿಡುತ್ತಾಳೆ.

ತಮ್ಮಂದಿರೊಂದಿಗೆ, ಧರ್ಮರಾಯ, ತಾಯಿಯನ್ನು ನೋಡಲು ಬರುತ್ತಾನೆ. ಅವರು, ತಾಯಿಯ ದುಃಖಕ್ಕೆ ಕಾರಣವೇನೆಂದು ಕೇಳುತ್ತಾರೆ. ತನ್ನ ಸಂಕಟಕ್ಕೆ ಕಾರಣವನ್ನು ತಿಳಿಸಿದ ಕುಂತಿ, ತಮ್ಮ ಸ್ಥಿತಿಯನ್ನು ಹಳಿದು–"ಬಡವರಾದಿಂದಿವರ ಹಂಗಿನ। ಪೊಡಲ ಹೊರೆವುದರಿಂದ ಪ್ರಾಣವ ಬಿಡುವುದತಿ ಲೇಸು" ಎಂದು ಕಣ್ಣೀರು ಸುರಿಸುತ್ತಾಳೆ. ಅರ್ಜುನನಿಗೆ ಬಹಳ ಸಂಕಟವಾಗುತ್ತದೆ. ತಾಯಿಯ ಕಣ್ಣೀರನ್ನು ಒರೆಸಿ, ನಿಮ್ಮ ಚಿತ್ತದೊಳಾದುದನು ಬೆಸಸು – ಎಂದು ಪ್ರಾರ್ಥಿಸುತ್ತಾನೆ. ಆಗ ಕುಂತಿ–

ಪುರುಷರಲಿ ಪುತ್ರರಲಿ ಬಹಳೈ
ಶ್ವರಿಯ ತನಗುಂಟೆಂದು ತಾ ಸುರ
ಕರಿಯ ನೋಂತಳು ಸುಬಲನಂದನೆ
ಕರೆಸದೆಮ್ಮವನು।
ಕರ ಬಡವರಾವೆಂದು ನಮ್ಮನು
ಸರಕು ಮಾಡಳು ಬೆಂದೊಡಲನಿದ
ಹೊರೆಯ ಬೇಕೇ ಪಾರ್ಥ

ಎಂದಳು ಕುಂತಿ ಬಿಸುಸುಯ್ಯು.

ತಾಯಿಯ ಮಾತು ಪಾರ್ಥನಲ್ಲಿ ಕ್ಷಾತ್ರಾಗ್ನಿಯನ್ನು ಪ್ರಜ್ವಲಗೊಳಿಸುತ್ತದೆ. ನೂರಜ

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾಲಯ ಆಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

ಐಶ್ವರ್ಯ ವೃದ್ಧಿಸುತ್ತದೆ–ಎಂಬ ಅಹಂಕಾರ ಂದ, ಗಾಂಧಾರಿ. ಎಷ್ಟನ್ನು ಕರೆಸಿದ್ದರೆ ನಾಯಿತು? ಅವಳು ಕೇವಲ ಭೂಲೋಕದ ಣ್ಣಿನಿಂದ ಮಾಡಿದ ಗಜವನ್ನು ಪೂಜಿಸಿದ್ದಾಳೆ, ಷ್ಟೆ. ದೇವಲೋಕದ ಐರಾವತವನ್ನೇ ಊಲೋಕಕ್ಕೆ ಕರೆಸಿ, ನಿನ್ನಿಂದ ಪೂಜಿಸುತ್ತೇನೆ. ಷ್ಟೇ ಅಲ್ಲ–

ಸುರಕರಿಯು ಹೋಲುವೆಯು ಕೌರವ
ರರಿಯು ಮಣ್ಣಲಿ ಮಾಡಿ ನೋಂತರೆ
ಧರೆಯ ಜನ ತಾವೆಲ್ಲ ನೋಡಿತವಾವ
ಘನವೆಂದು ॥
ಸುರಕನ್ಯೆರಾವತವನಾ ಸುರ
ತರುವನಾ ಸುರಧೇನುವನು ನಿ
ಮ್ಮರಮನೆಗೆ ತಹೆನೆಂದು ಭಾಷೆಯು
ನೊರೆದನಾ ಪಾರ್ಥ ॥

ತಾಯಿಯಿಂದ ಬೀಳ್ಕೊಂಡ ಅರ್ಜುನ, ನೇರ ವಾಗಿ ಶಸ್ತ್ರಶಾಲೆಗೆ ಬರುತ್ತಾನೆ. ಇಂದ್ರನಿಗೆ ಒಂದು ಓಲೆಯನ್ನು ಬರೆದು, ಬಾಣದ ತುದಿಗೆ ಕಟ್ಟಿ, ಬಾಣವನ್ನು ಸೆಳೆದು ಬಿಡುತ್ತಾನೆ. ಅದು ನೇರವಾಗಿ ಬಂದು ಇಂದ್ರನ ಸಭಾಭವನದಲ್ಲಿದ್ದ ಕಂಬವೊಂದರಲ್ಲಿ ಕೀಲಿಸಿ ನಿಲ್ಲುತ್ತದೆ. ಬಾಣದ ತುದಿಗೆ ಬಿಗಿದ ಓಲೆಯನ್ನು ಇಂದ್ರನ ಕರಣಿಕರು ಓದುತ್ತಾರೆ. "ಎಮ್ಮಯ ಮಾತೆ ಕುಂತಿಗೆ ಒಂದು ನೋಂಪಿಯ ಬಯಕೆಯಾಯಿತು. ಬೇಡಿದ ನಾನಾ ವಸ್ತುಗಳ ಕಳುಹು. ಜನನಿಯ ಬಯಕೆಯ ಸಲಿಸಿ, ಎಂಟು ದಿನದೊಳಗೆ ಕಳುವುವೆ". ಎಂದು ಅರ್ಜುನ, ವಿನಯಪೂರ್ವಕವಾಗಿ ಪ್ರಾರ್ಥಿಸಿದ್ದುದನ್ನು ಎಲ್ಲರೂ ಕೇಳುತ್ತಾರೆ. ಚಕ್ರವರ್ತಿನಿ ಗಾಂಧಾರಿಯ ನೋಂಪಿಗಿಂತ ತನ್ನ ತಾಯಿಯ ನೋಂಪಿ ಮಿಗಿಲಾದದ್ದೇ ಆಗಬೇಕು–ಎನ್ನುವ ಹಟ ಅರ್ಜುನನದು. ಅದಕ್ಕಾಗಿಯೇ ಅವನು ಐರಾವತದೊಡನೆ ಇತರ ದೇವಲೋಕದ ವಸ್ತುಗಳನ್ನು ಕಳಿಸುವಂತೆ ಇಂದ್ರನನ್ನು ಪ್ರಾರ್ಥಿಸಿದ್ದಾನೆ. ಆ ವಸ್ತುಗಳು ಯಾವುವೆಂದರೆ, ಸುರಧೇನು, ಕಲ್ಪವೃಕ್ಷ, ಕೆಲಸಮಾಡಲು ಕಮಲಮುಖಿಯರು, ವಜ್ರಾಯುಧ, ರತ್ನಾಭರಣಗಳು, ಪದಕಗಳು, ರಂಭೆ–ಊರ್ವಶಿಯರು, ಮೇಳ ಸಹಿತ ತುಂಬುರರು, ನಾನಾ ಪ್ರಸಂಗಾಡಂಬರದ ಸುರವಾದ್ಯಗಳು. ಒಂದು ವೇಳೆ ಇವನ್ನು ಕಳಿಸದಿದ್ದರೆ ಏನಾಗುತ್ತದೆ–ಎಂಬುದನ್ನೂ, ಆ ಪತ್ರದಲ್ಲಿ ಅರ್ಜುನ ತಿಳಿಸಿದ್ದಾನೆ. ಹಾಗೆ ತಿಳಿಸುವಾಗ ಅವನು ತನ್ನ ಉದ್ಧಟತನವನ್ನು ಮೆರೆಯದೆ, ತಂದೆಯಾದ ಇಂದ್ರನ ಬಗೆಗೆ ದೇವತೆಗಳ ಹಾಗೂ ದೇವವಸ್ತುಗಳ ಬಗೆಗೆ ತನ್ನ ಗೌರವವನ್ನು ಸೂಚಿಸಿದ್ದಾನೆ. ಅದೇ ಮಟ್ಟದಲ್ಲಿ, ತಾಯಿಗೆ ಆಗಿರುವ ಅವಮಾನದ ಸೇಡಿಗೆ ಪ್ರತಿಸೇಡನ್ನು ತೀರಿಸಿಕೊಳ್ಳಬೇಕೆಂಬ ತನ್ನ ಉತ್ಕಟ ಆಕಾಂಕ್ಷೆಯನ್ನೂ ವ್ಯಕ್ತಗೊಳಿಸುತ್ತಾನೆ–

ಪರ್ವತಾನ ಮಿಮ್ಮ ಕೇಳ
ಸೌಖ್ಯವುಪ ಲಕ್ಷಿತನನು ಸೋಡಿದೆ
ಒಪ್ಪ ಐರಾವತವ ಕಳುಹದೆ
ಇಂದ್ರಲೋಕದಲಿ ॥
ಇಪ್ಪವರ ನಾನರಿವೆ ಪಿಪ್ಪಾ
ತಪ್ಪಿ ನಡೆವವನಲ್ಲ ನಾನಿದೆ
ಸೊಪ್ಪು ಸುತ್ತಿಸಿ ಸರಳಲೆಸೆವೆನು ನಿಮ್ಮ
ಪಾದದಾಣೆಂದ ॥

ಭೂಲೋಕದ ಸಾಮಾನ್ಯ ಮಾನವನಿಗೆ ದೇವೇಂದ್ರನನ್ನು, ಬಾಣದ ಮೂಲಕ ಪತ್ರ ಕಳುಹಿಸಿ, ಕೇಳುವಷ್ಟು ಸಾಹಸವುಂಟಾಯಿತೇ? ದೇವಲೋಕದ ವಸ್ತುಗಳು ಎಂದರೆ ಬೇಕೆನಿಸಿದ ಕೂಡಲೇ ಸುಲಭವಾಗಿ ಪಡೆಯಬಹುದಾದ ವಸ್ತುಗಳೇ? ಎಂದು ಇಂದ್ರನಿಗೆ ಅರ್ಜುನನ ಮೇಲೆ ಕೋಪವುಂಟಾಗುತ್ತದೆ ಅರ್ಜುನನಿಗೆ ಬುದ್ಧಿ ಕಲಿಸಲೇಬೇಕು – ಎಂದು ನಿರ್ಧರಿಸಿದ ಇಂದ್ರ, ಮಾತಲಿಗೆ ರಥವನ್ನು ಸಿದ್ಧಪಡಿಸುವಂತೆ ಹೇಳುತ್ತಾನೆ. ಅಮರಗಣಗಳೂ ಇಂದ್ರನ ಆಜ್ಞೆಯಂತೆ ಸಿದ್ಧವಾಗುತ್ತವೆ. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ನಾರದ ಬರುತ್ತಾನೆ ವಿಷಯವನ್ನು ತಿಳಿದ ನಾರದ, ನಿವಾತಕವಚರು ಅಮರಾವತಿಗೆ ಮುತ್ತಿಗೆ ಹಾಕಲು ಹವಣಿಸುತ್ತಿರುವುದನ್ನು ತಿಳಿಸಿ, ಈ ಸಮಯದಲ್ಲಿ ಅರ್ಜುನನೊಡನೆ ವಿರೋಧ ಕಟ್ಟಿಕೊಳ್ಳುವುದು ಯುಕ್ತವಲ್ಲವೆಂಬುದನ್ನು ಹೇಳುತ್ತಾನೆ. ಇಂದ್ರನಿಗೆ ನಿಜಾಂಶದ ಅರಿವು ಮೂಡುತ್ತದೆ ಆಗ ಇಂದ್ರ–"ಕಾವಿಂದ ವಸ್ತುಗಳ ಕೊಡುವೆವು, ಭೂಮಿಗೆ ಅಮರಾವತಿಗೆ ಬಟ್ಟೆಯ ಮಾಡು. ಐರಾವತವನ್ನು ಎದುರುಗೊಳ್ಳಲು ಕೃಷ್ಣನ ಒಡಗೊಂಡು ಬಾ" ಎಂದು ಮಾರೋಲೆಯನ್ನು ಕಳುಸುತ್ತಾನೆ

ಇತ್ತ, ಇಂದ್ರಪ್ರಸ್ಥದಲ್ಲಿ ಕುಂತಿಯ ಗಜಗೌರಿ ವ್ರತದ ಸಿದ್ಧತೆ ಪ್ರಾರಂಭವಾಗುತ್ತದೆ. ಧರ್ಮರಾಯನೇ ಹೋಗಿ ಭೀಷ್ಮ, ದ್ರೋಣ, ವಿದುರ–ಮುಂತಾದವರಿಗೆ ವಿಷಯ ತಿಳಿಸಿ, ಅವರೇ ಮುಂದೆ ನಿಂತು ಕಾರ್ಯವನ್ನು ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸಲು, ಅವರು ಒಪ್ಪುತ್ತಾರೆ. ಅವರೆಲ್ಲ ಇಂದ್ರಪ್ರಸ್ಥಕ್ಕೆ ಬಂದು, ಕುಂತಿಯು ಗಾಂಧಾರಿಯನ್ನೂ; ಯುಧಿಷ್ಠಿರ ಧೃತರಾಷ್ಟ್ರನನ್ನೂ; ಭೀಮ ದುರ್ಯೋಧನನನ್ನೂ; ಅರ್ಜುನ ದುಶ್ಶಾಸನನನ್ನೂ; ಉಳಿದ ರಾಜರನ್ನು ನಕುಲ ಸಹದೇವರೂ ಆಹ್ವಾನಿಸಬೇಕೆಂದು ತಿಳಿಸುತ್ತಾರೆ. ಅದರಂತೆ ಅಲಂಕೃತರಾಗಿ ಪಾಂಡವರು ಹಸ್ತಿನಾವತಿಗೆ ಬರುತ್ತಾರೆ.

ಧರ್ಮರಾಜ ಧೃತರಾಷ್ಟ್ರನನ್ನು ಕಂಡು, ಅರ್ಜುನನು ಇಂದ್ರನ ಐರಾವತವನ್ನು ತರಿಸಲು ಮಾಡಿದ ಪ್ರಯತ್ನವನ್ನು ವಿವರಿಸಿ–"ಚಿತ್ತವಿಸು ಹಿರಿಯಯ್ಯ ನೀವೆಮ್ಮತ್ತ ಬಿಜಯಂಗೈದು, ತಾಯಿಗೆ ಮತ್ತ ಗಜ ನೋಂಪಿಯನು ಮಾಡಿಸಲಿಕ್ಕೆ, ಮನ ಮಾಡಿರೆ."–ಎಂದು ಪ್ರಾರ್ಥಿಸುತ್ತಾನೆ. ಇದನ್ನು ಕೇಳಿ ಧೃತರಾಷ್ಟ್ರನಿಗೆ ಸಂತೋಷವಾಗುತ್ತದೆ. "ಈ ಅರ್ಜುನ ನಮ್ಮ ವಂಶದಲ್ಲಿ ಹುಟ್ಟಿ ನಮಗೆ ಇಹಪರ ಸೌಖ್ಯಗಳನ್ನು ಕೊಟ್ಟ"–ಎಂದು ಮೆಚ್ಚಿ ಮಾತನಾಡಿ, "ನನಗೇನೋ ಬರಬೇಕೆಂದು ಆಸೆ ಆದರೆ ವಿಗಡನೈ ಕುರುರಾಯ, ಬಂದರೆ ದುಗುಡ ವನು ತಾಳುವನು" ಎಂದು ತನಗಿರುವ ಅಳುಕನ್ನು ವ್ಯಕ್ತಗೊಳಿಸುತ್ತಾನೆ ಅನಂತರ ಧರ್ಮರಾಯನನ್ನು ಧೃತರಾಷ್ಟ್ರ ಉಚಿತ ಉಡುಗೊರೆಗಳಿಂದ ಕಳಿಸಿಕೊಡುತ್ತಾನೆ

ಭೀಮ ದುರ್ಯೋಧನನನ್ನು ಆಹ್ವಾನಿಸಲು ಬರುತ್ತಾನೆ. ರಾಜಭವನವನ್ನು ಭೀಮ ಪ್ರವೇಶಿಸುತ್ತಿರುವುದನ್ನು ಕಂಡು, ದುರ್ಯೋಧನ, ಘೀಳಿಡನೆ ಇದಿರೆದ್ದು ಬಂದು ಭೀಮನನ್ನು ಸೆಳೆದು ಬಿಗಿದಪ್ಪಿ, ತಕ್ಕೈಸಿ, ಕರೆದೊಯ್ದು ತನ್ನ ಸಿಂಹಾಸನದಲ್ಲಿ ಅರ್ಧಾಸನವನಿತ್ತು ಕುಳ್ಳಿರಿಸುತ್ತಾನೆ ಹೊಂಬಟ್ಟಲಲ್ಲಿ ವೀಳ್ಯವ ತರಿಸಿಕೊಟ್ಟು ಉಪಚರಿಸುತ್ತಾನೆ. ಇದರಿಂದ ಭೀಮನಿಗೂ ಸಂತೋಷವಾಗುತ್ತದೆ. ಆಮೇಲೆ ದುರ್ಯೋಧನನ ಕೈಯಲ್ಲಿ ಮಂತ್ರಾಕ್ಷತೆಯನ್ನಿಟ್ಟು, ಅರ್ಜುನನು ಇಂದ್ರನ ಐರಾವತವನ್ನು ಇಂದ್ರಪ್ರಸ್ಥಕ್ಕೆ ಕರೆದು ತರುತ್ತಿರುವುದನ್ನು ವಿವರಿಸಿ–"ಮಂಡಲಾಧಿಪ ನೀನು ಬಂದು ಉದ್ದಂಡದಲಿ ಮಾತೆಯನು ನೋನಿಸಿ, ಬಳಿಕ ಮರಳುವುದು" ಎನ್ನುತ್ತಾನೆ. ಭೀಮನ ಮಾತನ್ನು ಕೇಳುತ್ತಿದ್ದಂತೆ ದುರ್ಯೋಧನನ ಅಂತರಂಗದಲ್ಲಿ ದ್ವೇಷ ಗರಿಗೆದರುತ್ತದೆ. "ನಾವು ಎರೆಯ ಮಣ್ಣನು ತಂದು ಮಾಡಿದ ಐರಾವತಕ್ಕೆ ಬದಲಾಗಿ, ನೀವು ಇಂದ್ರನ ಐರಾವತವನ್ನೇ ತರಿಸುತ್ತಿದ್ದೀರಿ. ನನ್ನನ್ನು ಒತ್ತಾಯಮಾಡಿ ಕರೆಯಬೇಡ. ನಮ್ಮಯ ಬರವು ತಾನಿಲ್ಲ" ಎಂದು ಸ್ಪಷ್ಟವಾಗಿ ದುರ್ಯೋಧನ ಹೇಳುತ್ತಾನೆ. ಈ ಮಾತುಗಳನ್ನು ಕೇಳಿ ಭೀಮನ ರಕ್ತವೂ ಕಾವೇರುತ್ತದೆ. ಆದರೆ, ಅದನ್ನು ತೋರ್ಪಡಿಸದೆ–

ಬಂದು ನಿನ್ನನು ಕರೆಯಲೊಡನೈ
ತಂದರೊಳ್ಳಿತು ಬಾರದಿದ್ದರೆ
ಮುಂದೆ ಬಹ ಕಾರ್ಯಾರ್ಥ ಸಿದ್ಧಿಗೆ
ಸಾಧಕವು ನಮಗೆ ॥
ಇಂದು ಗರ್ವದಲಿದ್ದ ಫಲವನು
ಮುಂದೆ ತೋರುವೆನೆನುತ ಪವನಜ
ಸಂದ ಧೈರ್ಯದೊಳೇಳೆ ನಡುಗಿತು
ಕೌರವಾಸ್ಥಾನ ॥

ಅನಂತರ ಭೀಮ, ಅಲ್ಲಿದ್ದ ಸಾಮಂತರಾಜರನ್ನೆಲ್ಲಾ ಆಹ್ವಾನಿಸಿ ಹೊರಟು ಬರುತ್ತಾನೆ.

ಇತ್ತ ಅರ್ಜುನ ದುಶ್ಶಾಸನನ ಅರಮನೆಗೆ ಬರುತ್ತಾನೆ. ಅದನ್ನು ದೂತರ ಮೂಲಕ ತಿಳಿದ ದುಶ್ಶಾಸನ ತಾನೇ ಬಂದು, ಕರವ ಹಿಡಿದೊಡ

ಗೊಂಡು ಬಂದು, ಸಿಂಹಾಸನದ ಮೇಲಕ್ಕಿರಿಸಿ ಕುಳ್ಳಿರಿಸುತ್ತಾನೆ. ಮತ್ತೆ, ವೀಳೆಯವನ್ನು ಕರಿಸಿ ಕೊಡುತ್ತಾನೆ. ಆವೇಳೆ "ಬರವು ಅಪೂರ್ವ, ಇದೇನು ಕಾರಣ?" ಎಂದು ಪ್ರಶ್ನಿಸುತ್ತಾನೆ. ಅರುಣವರ್ಣಾಕ್ಷತೆಗಳನ್ನು ಕೊಟ್ಟು, ಅರ್ಜುನ, ತಾನು ಐರಾವತವನ್ನು ಕರಿಸುತ್ತಿರುವುದನ್ನು ತಿಳಿಸಿ–

ಅದುವೆ ಕಾರಣ ನಿಮ್ಮ ಭವನಕೆ
ಮುದದಿ ಕರೆಯಲು ಬಂದೆನೆಲವೋ
ಹದುಳವಲಿ ನಡೆತಂದು ಜನನಿಯ
ನೋಹಿಯುತ್ಸವವ ॥
ಸದುಗುಣನೆ ನಲಿವಡಿಸಿ ಇಂದ್ರನ
ಮದಗಜವನಿದಿಗೊಂಡು ಮನದ
ಭ್ಯುದಯವನೆ ನೀ ನೋಡಿ ಮರಳ್ಳೆ ತಮ್ಮ
ಕೇಳೆಂದ ॥

ಅರ್ಜುನನ ಆಹ್ವಾನಕ್ಕೆ ದುಃಶಾಸನ ಮುಚ್ಚು ಮರೆಯಿಲ್ಲದೆ, ತನ್ನ ಪ್ರತಿಕೂಲ ಪ್ರತಿಕ್ರಿಯೆಯನ್ನು ವ್ಯಕ್ತಗೊಳಿಸುತ್ತಾನೆ–

ಮ್ಮತ್ತಿಕೆಯು ಗಜದಿಂದ ನೋಂತರೆ
ಮತ್ತೆಯೈರಾವತವನಿಳುಹಿಪಿ
ರಿತ್ತ ಸೂರ್ವರಲೇನು ಮುರಿಮುದು ನಮ್ಮ
ವಾದಗಳು ॥
ಮತ್ತೆ ನಿಮ್ಮಯ ನೋಂಪಿಗೈತಹ
ಹೊತ್ತು ಸಮಗಳವಲ್ಲ ಕೇಳ್ಳೆ
ವಿಸ್ತರಿಸಿ ನೆರೆಹೇಳ ಬೇಡೈ ಪಾರ್ಥ
ನಮಗೆಂದ ॥

ದುಶ್ಶಾಸನನ ಹೊಟ್ಟೆಕಿಚ್ಚಿನ ಉತ್ತರ, ಅರ್ಜುನನ ರಕ್ತವನ್ನೂ ಬಿಸಿಗೊಳಿಸುತ್ತದೆ. ಆದರೆ ಅದನ್ನು ತೋರ್ಪಡಿಸದೆ ದಿಟ್ಟ ಉತ್ತರವನ್ನು ಕೊಟ್ಟು, ಅರ್ಜುನ, ಹಿಂತಿರುಗಿಬರುತ್ತಾನೆ. ಮಾದ್ರೀಸುತರು ಇತರ ಅರಸರನ್ನು ಆಹ್ವಾನಿಸುತ್ತಾರೆ. ಅವರೆಲ್ಲರೂ ಸಂತೋಷದಿಂದ ಬರಲೊಪ್ಪುತ್ತಾರೆ ಅರ್ಜುನನೇ ಕೃಷ್ಣನನ್ನು ಕರೆತರಲು ದ್ವಾರಕೆಗೆ ಹೋಗುತ್ತಾನೆ. ಕೃಷ್ಣನಿಗೆ ಸಂತೋಷವಾಗಿ – "ಬಹೆವು, ನಮ್ಮಯ ಸೋದರತ್ತೆಯ ನೋಹಿಯನು ನಿರ್ಭೀದದಲಿ ನೆರೆ ನಡೆಸಿ ಕೊಡುವೆವು" ಎಂದು ಹೇಳಿ, ಅವನ ಜೊತೆಯಲ್ಲಿಯೇ ಹೊರಟು, ಇಂದ್ರಪ್ರಸ್ಥಕ್ಕೆ ಬರುತ್ತಾನೆ. ಇಂದ್ರಪ್ರಸ್ಥದಲ್ಲಿ ಎಲ್ಲರೂ ಕೃಷ್ಣನನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆ.

ಎಲ್ಲ ದಿಕ್ಕಿಗೂ ಕುಂತಿಯು ಮಾಡುವ ಗಜ ನೋಂಪಿಯ ಸುದ್ದಿ ಹರಡುತ್ತದೆ. ದೇವಲೋಕದ ವಸ್ತುಗಳನ್ನು ಕಣ್ಣಾರೆ ಕಾಣಲು ದಿಕ್ಕು ದಿಕ್ಕಿನ ಅರಸರೂ, ಜನರೂ ಗುಂಪು ಗುಂಪಾಗಿ ಬರುತ್ತಾರೆ. ಭೀಷ್ಮರೇ ಮುಂದೆ ನಿಂತು ಬರುವವರನ್ನೆಲ್ಲ ಎದುರ್ಗೊಂಡು ಅವರವರ ಬಿಡಾರಕ್ಕೆ ಕಳಿಸುತ್ತಾರೆ. ಋಷಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಭೀಮ ಸಿದ್ಧನಾಗುತ್ತಾನೆ.

ಕೃಷ್ಣನ ನೇತೃತ್ವದಲ್ಲಿ, ದೇವಲೋಕದ ಐರಾವತ–ಮುಂತಾದುವುಗಳು ಇಳಿದು ಬರಲು ಅರ್ಜುನನು ಬಾಣದ ಸೇತುವೆಯನ್ನು ನಿರ್ಮಿಸುತ್ತಾನೆ. ಸೇತುವೆ ಸಿದ್ಧವಾದ ಕೂಡಲೆ, ಇಂದ್ರ, ಐರಾವತ –ಮುಂತಾದ ಸಕಲ ವಸ್ತುಗಳಿಗೆ ಭೂಲೋಕಕ್ಕೆ (29 ನೇ ಪುಟನೋಡಿ)

# ತ್ವಚ್ಚರಿತಂ ಪ್ರಭೋ ವಿಚಿತ್ರಂ

ಭಾರತೀಯ ಸಾಹಿತ್ಯದಲ್ಲಿ ಕೃಷ್ಣಕಥೆ ಒಂದು ವಿಭಾಜ್ಯ ಅಂಗದಂತಿದೆ. ನಮ್ಮ ದೇಶದ ಎಲ್ಲ ಾಷೆಗಳಲ್ಲೂ ಬಾಲಗೋಪಾಲ ಲೀಲಾವಿನೋದ ಳನ್ನು ಕವಿಗಳು ಬಣ್ಣಿಸಿ ಧನ್ಯರಾಗಿದ್ದಾರೆ. ಂಗೀತದಲ್ಲೂ, ಸಾಹಿತ್ಯದಲ್ಲೂ ಕೃಷ್ಣನ ವೇಣು ಾನ, ಮಧುರನರ್ತನ, ಮಧುರತರ ಮಂದಹಾಸ, ರಿನೋಟದ ವೈಖರಿ–ಮುಂತಾದುವನ್ನು ಕಥಾ ಸ್ತುಗಾಗಿ ಸ್ವೀಕರಿಸಲಾಗಿದೆ. ತ್ಯಾಗರಾಜರು, ರಂದರದಾಸರು, ಸೂರದಾಸ, ಗದಾಧರಭಟ್ಟ, ೀರಾಬಾಯಿ ಮುಂತಾದ ವಾಗ್ಗೇಯಕಾರರಿಗೂ ದ್ರಭಟ್ಟ, ಅಯೋಧ್ಯಾಸಿಂಹ, ಕುಮಾರವ್ಯಾಸ, ಕ್ಷ್ಮೀಶ, ನಂದದಾಸ ಮುಂತಾದ ಕವಿ ರೇಣ್ಯರಿಗೂ ಶ್ರೀಕೃಷ್ಣನೆಂದರೆ ಚತುರ್ಭುಜ ಾಗುತ್ತದೆ. ಜಯದೇವ, ಲೀಲಾಶುಕ-ಪೋತನ ುಂತಾದ ರಸಸಿದ್ಧ ಕವೀಶ್ವರರಿಗಂತೂ ನೈ-ಮರೆತುಹೋಗುತ್ತದೆ.

ರಾಮ ಸರಯೂತೀರವಿಹಾರಿ. ಕೃಷ್ಣ ಯಮುನಾತೀರವಿಹಾರಿ. ಆತ ರಾವಣಾರಿ–ಈತ ಕಂಸಾರಿ. ಆತ ಸತ್ಯಮೂರ್ತಿ–ಈತ ಪ್ರೇಮಮೂರ್ತಿ. ಆತ ತ್ಯಾಗಮೂರ್ತಿ – ಈತ ಗಾನಮೂರ್ತಿ. ಆತ ನಡೆದ ದಾರಿ ಧರ್ಮಮಾರ್ಗ. ಈತ ನುಡಿದ ರೀತಿ ಧರ್ಮ ಮಾರ್ಗ. ಆತ ಮೃದುಭಾಷಿ–ಈತ ಸ್ಮಿತಭಾಷಿ. ಆತ ಗಂಭೀರ. ಈತ ಸುಂದರ. ಸತ್ಯಾರಾಧಕರಿಗೆ ರಾಮ ಹೇಗೋ ಸೌಂದರ್ಯಾರಾಧಕರಿಗೆ ಕೃಷ್ಣ ಹಾಗೆ. ಇಬ್ಬರೂ ಜಗನ್ಮಂಗಳ ಚಿಂತಕರು. ಇಬ್ಬರೂ ಗೃಹಸ್ಥರು. ಇಬ್ಬರೂ ಯೋಗಿಗಳು. ಆತ ಮಾಡಿದ ಕಾರ್ಯ ದೊಡ್ಡದು. ಈತ ಮಾಡಿಸಿದ ಕಾರ್ಯ ದೊಡ್ಡದು. ಭಗವಂತನ ಈ ಎರಡು ಅವತಾರಗಳಲ್ಲಿ ಯುಗಾನುಕೂಲವಾಗಿ ಕಾರ್ಯ ನಡೆದಿದೆ. ಇಬ್ಬರೂ ಆಶ್ರಿತವತ್ಸಲರೇ. ಪುಣ್ಯಮೂರ್ತಿಗಳೆ–

ಸಂಭವಾಮಿ ಯುಗೇ ಯುಗೇ– ಎಂಬ ಮಾತಿನ ಪ್ರಕಾರ ದೈವಶಕ್ತಿ ಈ ಪುಣ್ಯಭೂಮಿಯಲ್ಲಿ ಅನೇಕ ರೀತಿಯಲ್ಲಿ ಅವತರಿಸಿದ್ದರೂ, ರಾಮಾವತಾರ ಕೃಷ್ಣಾವತಾರಗಳೇ ಅತ್ಯಂತ ಸುಂದರ–ಅತ್ಯಂತ ಬಂಧುರ-ಎಂಬಂತೆ ನಮ್ಮ ಪೂರ್ವ ಕವಿಗಳು, ತಮ್ಮ ಅಮೂಲ್ಯ ರಚನೆಗಳಲ್ಲಿ ಆ ಬಗ್ಗೆ ವಿಶದವರ್ಣನೆ ಮಾಡಿದ್ದಾರೆ.

ವಾಗ್ಗೇಯಕಾರ ಶಿರೋಮಣಿ ಸದ್ಗುರು ತ್ಯಾಗರಾಜಸ್ವಾಮಿ ಗಾನಮೂರ್ತಿ ಎಂಬ ರಾಗದಲ್ಲಿ ಆ ಮಾತನ್ನೇ ಪಲ್ಲವಿಯಾಗಿ ಮಾಡಿಕೊಂಡು ಗಾನಮೂರ್ತೇ–ಶ್ರೀಕೃಷ್ಣ – ವೇಣುಗಾನಮೂರ್ತೇ –ಎಂಬ ಅಮೂಲ್ಯ ಕೃತಿಯನ್ನು ರಚಿಸಿದ್ದೇ ಅಲ್ಲದೆ ನೌಕಾಚರಿತ್ರ–ಎಂಬ ಗೇಯ ನಾಟಕವನ್ನೇ ರಚಿಸಿ, ಕೃಷ್ಣನ ಲಾವಣ್ಯ–ಸೌಂದರ್ಯಗಳನ್ನು ಅನುಭವಿಸಿ ಧನ್ಯರಾಗಿದ್ದಾರೆ. ಗೋಪಕನ್ಯೆಯರು ಕೃಷ್ಣನ ಚೇಷ್ಟೆ–ಹಾವಳಿಯನ್ನು ತಾಳಲಾರದೆ ಯಶೋದೆಗೆ ದೂರು ಹೇಳಿದಾಗ; ಆಕೆಯ ಮಡಿಲಲ್ಲೇ ಕುಳಿತಿದ್ದ ಮುಗ್ಧ ಮುಕುಂದ ಮುಗುಳು ನಗುತ್ತಿದ್ದನೆಂದು ತ್ಯಾಗರಾಜರು ಆರಭಿ ರಾಗದಲ್ಲಿ ಹಾಡಿ, ಆತನ ಸಮಯೋಚಿತ ವಚೋವೈಖರಿಯನ್ನು ನಾನಾ ಸಂದರ್ಭಗಳಲ್ಲಿ ಕಂಡು ಆನಂದಿಸಿದ್ದಾರೆ.

ಯಶೋದ ತನಯುಂಡನುಚು
ಮುದ್ದು ಬೆಟ್ಟಿ ನವ್ವುಚುಂಡ ಹರಿ
ಸಮಯಾನಿಕಿ ತಗು ಮಾಟಲಾಡೆನೆ–

ಎನ್ನುತ್ತಾರೆ ತ್ಯಾಗರಾಜರು.

ಪುರಂದರ ದಾಸರಂತೂ ಕೃಷ್ಣ ಭಕ್ತಿಯಲ್ಲಿ ತೇಲಿ ಮುಳುಗಿದ ವಾಗ್ಗೇಯಕಾರರು. ಕೃಷ್ಣನ ಬಾಲ ಲೀಲೆಗಳನ್ನು ಬಗೆಬಗೆಯಾಗಿ ತಮ್ಮ ರಚನೆಗಳಲ್ಲಿ ಬಣ್ಣಿಸಿದ್ದಾರೆ. ಮಕ್ಕಳನ್ನು ಹೆದರಿಸಲು–ತಾಯಿಯರು ಗುಮ್ಮ– ಎಂಬ ವಿಚಿತ್ರ ಪದವನ್ನು ಉಪಯೋಗಿಸುತ್ತಾರೆ. ಒಮ್ಮೆ ಯಶೋದೆಯೂ ಗುಮ್ಮನಿಗೆ ಹಿಡಿದುಕೊಡುತ್ತೇನೆ– ಎಂದು ಕೃಷ್ಣನನ್ನು ಹೆದರಿಸಿರಬಹುದು. ಆಗ ಕೃಷ್ಣ ಭಯಪಟ್ಟಿರಲೂ ಬಹುದು. ಹೆಣ್ಣುಗಳ ಜತೆಯಲ್ಲಾಡುವುದಿಲ್ಲ– ಹಾಲು ಬೆಣ್ಣೆ ಕದ್ದು ತಿನ್ನುವುದಿಲ್ಲ. ಕಟ್ಟಿದ್ದ ಕರುಗಳನ್ನು ಬಿಚ್ಚಿ ಓಡಿಸುವುದಿಲ್ಲ– ಇನ್ನು ಮೇಲೆ ಯಾವ ಚೇಷ್ಟೆಯನ್ನು ಮಾಡದೆ– ದೇವರಂತೆ ಒಂದು ತಾವಿಲಿ ಕೂಡುವೆ– ಗುಮ್ಮನ ಕರೆಯದಿರೆ–ಅಮ್ಮ–ಎಂದು ಅಂಗಲಾಚಿ ಕೇಳಿಕೊಳ್ಳುವ ಮಧುರ ಸನ್ನಿವೇಶ ಪುರಂದರದಾಸರು ಬಹುವಾಗಿ ಅನುಭವಿಸಿದ್ದಾರೆ

ಕ್ರಿ. ಶ. 1675 ರ ಸುಮಾರಿನಲ್ಲಿದ್ದವರೆಂದು ಹೇಳಲಾಗುವ ಶ್ರೀ ನಾರಾಯಣತೀರ್ಥರು ಭಾಗವತದ ದಶಮಸ್ಕಂಧದ ಕೆಲವು ರಮಣೀಯ ಪ್ರಸಂಗಗಳನ್ನಾಧರಿಸಿ ಶ್ರೀಕೃಷ್ಣಲೀಲಾ ತರಂಗಿಣಿಯೆಂಬ ಮಧುರಾತಿ ಮಧುರ ಗ್ರಂಥವನ್ನು ರಚಿಸಿದ್ದಾರೆ. ಈ ತರಂಗಿಣಿಯ ಕವಿತೆಗಳು ಗಾಯನಕ್ಕೂ – ನರ್ತನಕ್ಕೂ ಹೊಂದಿಕೊಳ್ಳುವಂತಿವೆ. ಭಾಗವತದಲ್ಲಿ ಹನ್ನೆರಡು ಸ್ಕಂಧಗಳಿದ್ದರೆ, ಈ ಗ್ರಂಥದಲ್ಲಿ 12 ತರಂಗಗಳಿವೆ.

ಅಶೇಷ ಯೋಗಿಧ್ಯೇಯ ಪದಾಂಬುಜನಾದ ಕೃಷ್ಣ, ಆಮ್ನಾಯೈಕ ವೇದ್ಯನಾದ ಪರಬ್ರಹ್ಮವಸ್ತು. ಆದರೆ ಕವಿಮಾನ್ಯ ನಾರಾಯಣತೀರ್ಥನ ದೃಷ್ಟಿಯಲ್ಲಿ ಆತ–ಕಾರುಣ್ಯರಸಪೂರ ಕಾಳ, ಮೇಘಾಭಿರಾಮ; ಚಾರುಮುರಳೀನಾದ, ಕಲಿತ ಕೈವಲ್ಯಕಾಮ; ಕಲಭ ಸುಂದರ ಗಮನ; ಕಸ್ತೂರಿ ಶೋಭಿತಾನನ; ಮೀನಾಂಕ ಕೋಟಿ ಮೋಹನ. ಲೀಲಾಮಾನುಷ ವಿಗ್ರಹನಾದ ಮುಕುಂದನನ್ನು ಅದೆಷ್ಟು ಬಗೆಯಲ್ಲಿ ಬಣ್ಣಿಸಿದರೂ ಕವಿಗೆ ತೃಪ್ತಿ ಇಲ್ಲ

ಕೇದಾರಗೌಳ ರಾಗದಲ್ಲಿರುವ ಈ ಕವಿತೆಯ ಭಾವಸೌಂದರ್ಯ ಅನುಭವೈಕ ವೇದ್ಯವಾದದ್ದು.

ಸುರುಚಿರ ಹಾಸಂ ಸುಂದರಹಾಸಂ
ತರುಣಾರುಣ ಕಿರಣಾಧರ ಸರಸಂ ॥
ಭಾವುಕ ಚರಣಂ ಭವಸಂತರಣಂ
ಭವ್ಯಸೇವಕಜನ ಭಾಗ್ಯವಿತರಣಂ ॥
ನಂದಕುಮಾರಂ ನಗವರ ಧೀರಂ
ಬೃಂದಾವನಭುವಿ ವಿವಿಧವಿಹಾರಂ ॥

ಹೀಗೆ ಪ್ರವಹಿಸಿದೆ ಕೃಷ್ಣ ವೈಭವ ತರಂಗಿಣಿ !! ಮಂದಾರಪಾರಿಜಾತ ಸಂತಾನ ಕಲ್ಪಕ ಹರಿಚಂದನಾದಿ ತರುಬೃಂದಾನಂದಿತ ಬೃಂದಾವನ ಪ್ರಾಂತದಲ್ಲಿ, ಶಾರದ ಸಾಂದ್ರಚಂದ್ರಿಕಾಸಂಗ ವಿಲಸಿತ ಮಣಿವಾಲುಕಾಮೌಕ್ತಿಕ ಸಿತ ಸಿಕತಾ ಸುಧಾರಮಣೀಯ ವೇದಿಕೆಯಲ್ಲಿ, ಗೋಪರಮಣೀ ನಯನೋತ್ಪಲಾರಾಧಿತ ಮಹನೀಯ ಮದನಗೋಪಾಲ ಮೂರ್ತಿ ರಾಸನೃತ್ಯಕ್ಕೆ ಅಣಿಯಾಗಿ ನಿಂತಿದ್ದಾನೆ. ಆ ನರ್ತನಪಟು, ಯೋಗಿಕವಿ ನಾರಾಯಣತೀರ್ಥನ ಕಣ್ಣಿಗೆ ಹೇಗೆ ಕಾಣುತ್ತಾನೆ ?

ಆಗಮ ಶಿಖರೋದಿತ ಸತ್ಯಚಿದದ್ವಯ ಲಕ್ಷಣ ಸುಖಭಾನು, ಅಂಬುಜ ಲೋಚನ ಕಂಬು ಶುಭಗ್ರೀವ ಬಿಂಬಾಧರ ಚಂದ್ರಬಿಂಬಾನನ ; ಕರುಣಾಹಾಸ ಸುಧಾನಿಧಿಕರಣ, ಮುರಳೀಗಾನ ರಸಾಮೃತ ಪೂರಿತ ವ್ರಜಯುವತೀಮಾನ ಸಾರ್ಣವ, ಸ್ವೀಕೃತ ಬುದ್ಧ್ಯಾದಿ ತತ್ತ್ವ ಸಮನ್ವಿತ ದಿವ್ಯ ಮಂಗಳ ಗೋಪಬಾಲಕ ವೇಷ......

ಈ ರೀತಿಯಲ್ಲಿ ಕವಿ ಮದನಗೋಪಾಲನ ದರ್ಶನಮಾಡಿದ್ದಾನೆ – ತನ್ನ ಕಾವ್ಯದಲ್ಲಿ–ಸಹೃದಯರಿಗೆ ದರ್ಶನ ಮಾಡಿಸಿದ್ದಾನೆ.

---

**ವಿದ್ವಾನ್ ಬ. ನ. ಗುಂಡೂರಾವ್**

---





ಕಾಳೀಯನಾಗನ ಮದವಡಗಿಸುವ ಸಲುವಾಗಿ ಅಥವ ಕ್ರೂರ ಸರ್ಪಕ್ಕೂ ತನ್ನ ಚರಣಾರವಿಂದ ಗಳ ಸ್ಪರ್ಶಸುಖಾನುಭವ ನೀಡುವ ಕೃಪೆಗಾಗಿ, ಸರ್ಪದ ಹೆಡೆಯ ಮೇಲೆ ನಿಂತು ನರ್ತಿಸುವ ಹರಿ ಕಿಶೋರನ ಬಗ್ಗೆ ಆಂಧ್ರಕವಿ ಪೋತನಾಮಾತ್ಯನ ಈ ಕವಿತೆಯ ಭವ್ಯತೆಯನ್ನು ಗಮನಿಸಬೇಕು.

ಘನಯಮುನಾನದೀ ಕಲ್ಲೋಲಘೋಷಂಬು
ಸರಸಮೃದಂಗ ಘೋಷಂಬುಗಾಗ
ಸಾಧು ಬೃಂದಾವನ ಚರ ಚಂಚರೀಕ
ಗಾನಂಬು
ಗಾಯಕ ಸುಗಾನಂಬು ಗಾಗ
ಕಲಹಂಸ ಸಾರಸ ಕಮನೀಯ ಮಂಜು
ಶಬ್ದಂಬುಲು
ತಾಳ ಶಬ್ದಮುಲು ಗಾಗ
ದಿವಿನುಂಡಿ ವೀಕ್ಷಿಂಚು ದಿವಿಜ
ಗಂಧರ್ವಾದಿ ಜನುಲು
ಸಭಾಸೀನ ಜನುಲು ಗಾಗ
ಪದ್ಮರಾಗಾದಿ ರತ್ನಪ್ರಭಾ ಸಮಾನ
ಮಹಿತ ಕಾಳೀಯ ಫಣಿಫಣಾ ಮಂಟಪಮುನ
ನಳಿನ ಲೋಚನ ವಿಖ್ಯಾತ ನರ್ತಕುಂಡು
ನಿತ್ಯಗೈವುಣ್ಯಮುನ ನೃತ್ಯಮಾಡೆ॥

ಕೃಷ್ಣ, ಸಂಗೀತ–ಸಾಹಿತ್ಯ – ನೃತ್ಯಾದಿ ಸಕಲ ಕಲಾಕೋವಿದ, ಸರ್ಪದ ಹೆಡೆಯ ಮೇಲೆ ಕುಣಿವ ಬಾಲಗೋಪಾಲ – ಆ ನರ್ತನಕ್ಕೆ ಸಹಕಾರಿಯಾಗಿರುವ ಸುತ್ತಲ ವಾತಾವರಣ ಈ ಕವಿತೆಯ ವಸ್ತು.

ಹರಿವಯಮುನೆಯ ಲೋಲಲಹರಿಗಳ ಕಲ್ಲೋಲನಾದ ಈ ನರ್ತನಕ್ಕೆ ಮೃದಂಗ ಘೋಷವಂತೆ. ಬೃಂದಾವನದಲ್ಲಿ ಅರಳಿನಿಂತು ನಸುನಗೆ ಬೀರುತ್ತಿರುವ ಲಕ್ಷ ಲಕ್ಷ ಹೂಗಳ ಪರಿಮಳಕ್ಕೆ ಮನಸೋತುಬಂದ ಬಂಡುಣಿಗಳ ಝುಂಕಾರ ಈ ನರ್ತನಕ್ಕೆ ಸಂಗೀತವಂತೆ. ಕಲಹಂಸ ಸರಸಾದಿ ಹಕ್ಕಿಗಳ ಲಯಬದ್ಧ ರೆಕ್ಕೆಯ ಬಡಿತ ಈ ನರ್ತನಕ್ಕೆ ತಾಳವಂತೆ. ಅಂತರಿಕ್ಷದಲ್ಲಿ ಗುಂಪು ಗುಂಪಾಗಿ ನಿಂತು ನೋಡುತ್ತಿರುವ ಬೃಂದಾರಕ ಸಂದೋಹವೇ ಸಭಾಸೀನರಾದ ಕಲಾಪ್ರೇಮಿ ದರ್ಶಕರಂತೆ. ಇನ್ನಿಷ್ಟೆಲ್ಲ ಭವ್ಯತರವಾದ ಏರ್ಪಾಟಾಗಿರುವಾಗ ನರ್ತನಕ್ಕೆ ಸುಯೋಗ್ಯವಾದ ವೇದಿಕೆಯೊಂದು ಬೇಕಲ್ಲವೇ ? ಪದ್ಮರಾಗಾದಿ ರತ್ನಪ್ರಭಾ ಸಮಾನವಾದ, ಮಣಿಗಣ ವಿಭೂಷಿತವಾದ ಸರ್ಪರಾಜನ ವಿಶಾಲ ಹೆಡೆಗಳೇ ನಾಟ್ಯ ಮಂಟಪವಂತೆ – ನರ್ತನವೇದಿಕೆಯಂತೆ– ವಿಖ್ಯಾತ ನರ್ತಕನಾದ ನಳಿನಲೋಚನ ಶ್ಯಾಮಸುಂದರ – ನಾಟ್ಯಮಾಡುವ ಕಲಾವಿದನಂತೆ !! ಭಕ್ತಕವಿಯೂ ರಸಕವಿಯೂ ಆದ ಪೋತನನ ಈ ಶ್ರೀಮಂತ

(26 ನೇ ಪುಟ ನೋಡಿ)

# ಶಂಖ ಹಾಗೂ ಪಾಂಚಜನ್ಯ

ಪಾಪಪರಿಹಾರಕವೆಂದು ಪರಿಗಣಿಸಲ್ಪ ನ ವಸ್ತುಗಳಲ್ಲಿ 'ಶಂಖ'ದಸ್ಥಾನ ಅತ್ಯಂತ ದು. ಶ್ಯಾಮತಿ ಅಶುಭಾಃ ಅಸ್ಮಾತ್ ಬ ಶಂಖ ಪದದ ವಿಶ್ಲೇಷಣೆಯೇ ಶಂಖ ನ್ನು ಅಶುಭ ಶಾಮಕ ಎಂದು ಘೋಷಿಸು ದೆ. ಶಂಖವು ಸ್ವಯಂ ಅಶುಭ ಪರಿಹಾರಕ ದರೆ ಅದರ ಧ್ವನಿ ಮಂಗಳಕರ. ಅದುದ ದಲೇ ಶಂಖಕ್ಕೆ 'ಪಾವನ ಧ್ವನಿಃ' ಎಂಬ ಬ ಪರ್ಯಾಯವಿದೆ.

ಶಂಖದ ಉಪಯೋಗವು ವಿಶೇಷವಾಗಿ ರಾಧ್ಯದೇವತೋಪಚಾರವಾದ ಅಭಿಷೇಕ ಯೆಯಲ್ಲಿ. 'ಯಃ ಸ್ನಾಪಯತಿ ಗೋವಿಂ ತಸ್ಯ ಪುಣ್ಯಮನಂತಕಂ'ಎಂಬಂತೆ ಶಂಖ ದ ಮಾಡಿದ ಅಭಿಷೇಕ ಅನಂತ ಪುಣ್ಯ ಪ್ರದಕ.

ನಿತ್ಯೇ ನೈಮಿತ್ತಿಕೇ ಕಾಮ್ಯೇ
ಸ್ನಾನಾರ್ಚನ ವಿಲೇಪನೇ
ಶಂಖಂ ಸಮರ್ಚಯತಿಯಃ
ಶ್ವೇತದ್ವೀಪೇ ವಸೇದ್ಧಿ ಸಃ

ತ್ಯ, ನೈಮಿತ್ತಿಕ, ಕಾಮ್ಯಾದಿ ಸಮಸ್ತ ರ್ಮಗಳಲ್ಲಿಯೂ ಶಂಖದ ಅರ್ಚನೆ ಅಗತ್ಯ– ಖದಿಂದ ಮಾಡಿದ ಸಾಲಿಗ್ರಾಮಾದಿಗಳ ರ್ಥಕ್ಕೆ ಹೆಚ್ಚಿನ ಮಹತ್ತ್ವವಿದೆ. ಈ ರ್ಥವನ್ನು ಶಿರಸ್ಸಿನಲ್ಲಿ ಧರಿಸಿದರೆ ಯಮ ೂತಾದಿಗಳೂ ಕೂಡ ಭಯಪಟ್ಟು ಪದುರಿ ೋಗುವರಂತೆ ಶಂಖ ಬಾಜೇ ಭೂತಭಾಗೇ ಂಬುದು ಹಿಂದಿಭಾಷೆಯ ಲೋಕೋಕ್ತಿ

ಯಮದೂತಾಶ್ಚ ಕೂಷ್ಮಾಂಡ
ಪಿಶಾಚೋರಗ ರಾಕ್ಷಸಾಃ
ದೃಷ್ಟ್ವಾ ಶಂಖೋದಕಂ ಮೂರ್ಧ್ನಿ
ಭೀತಾ ಯಾಂತಿ ದಿಶೋದಶ

ಂಖಕ್ಕೆ ಇಷ್ಟೊಂದು ಮಹತ್ವವು ಬರಲು ಾರಣ ಅದು ಸಮಸ್ತ ಪುಣ್ಯತೀರ್ಥಗಳ ಂತೆಯೇ ಬ್ರಹ್ಮಾದಿ ದೇವತೆಗಳ ಆವಾಸ ಸ್ಥಾನ. ಶ್ರೀಮನ್ನಾರಾಯನೇ ಸಮಸ್ತತೀರ್ಥ ಹಾಗೂ ದೇವತೆಗಳಿಗೆ ಅಲ್ಲಿ ವಾಸ ಮಾಡು ವಂತೆ ಆಜ್ಞಾಪಿಸಿದ.

ಶಂಖದ ಇನ್ನೊಂದು ಉಪಯೋಗ್ಯ ಅದ ಂದ ಹೊರ ಹೊಮ್ಮುವ ಧ್ವನಿ. ಈ ಧ್ವನಿಯು ಧರ್ಮಾತ್ಮರಿಗೆ ಧರ್ಮ ಬುದ್ಧಿ ಪ್ರಚೋದಕವಾದಂತೆ, ಅಧರ್ಮಿಗಳಿಗೆ ಭಯೋತ್ಪಾದಕ. ಅದುದರಿಂದಲೇ ಹಿಂದಿನ ಕಾಲದಲ್ಲಿ ಮನೆಯಲ್ಲಿಯೂ ಪ್ರದೋಷ ಮತ್ತು ಪ್ರಾತಃ ಕಾಲಗಳಲ್ಲಿ ಶಂಖಧ್ವನಿಯನ್ನು ಮಾಡುವ ಪದ್ಧತಿ ಇತ್ತು.

'ಶಂಖ'ದಲ್ಲಿ ವೃತ್ತತ್ವ. ಸ್ನಿಗ್ಧತ್ವ ಮತ್ತು ಸ್ವಚ್ಛತ್ವ ಎಂಬ ಮೂರು ಗುಣಗಳನ್ನು ಮುಖ್ಯವಾಗಿ ಪರಿಗಣಿಸಲಾಗುವುದು. ಅಂತೆಯೇ ಇದರಲ್ಲಿ 'ಬಲಮುರಿ' 'ಎಡಮುರಿ' ಎಂಬ ಎರಡು ಪ್ರಭೇದವಿದೆ ಬಲಮುರಿ ಶಂಖವನ್ನ 'ದಕ್ಷಿಣಾವರ್ತ' ಎನ್ನುತ್ತಾರೆ.

ತೇ ವಾಮದಕ್ಷಿಣಾವರ್ತ
ಭೇದೇನ ದ್ವಿವಿಧಾಮತಾಃ
ದಕ್ಷಿಣಾವರ್ತ ಶಂಖಸ್ತು
ಕುರ್ಯಾದಾಯುರ್ಯಶೋ ಧನಂ

ಎಂಬ ಉಕ್ತಿಯಂತೆ ಬಲಮುರಿಯ ಶಂಖವು ಆಯುಸ್ಸು, ಯಶಸ್ಸು, ಐಶ್ವರ್ಯವನ್ನು ಉಂಟು ಮಾಡುವುದು.

ವೈದ್ಯಕೀಯ ದೃಷ್ಟಿಯಿಂದಲೂ ಶಂಖಕ್ಕೆ ಹೆಚ್ಚಿನ ಮಹತ್ವವಿದೆ. 'ಶಂಖ ಭಸ್ಮ' ಒಂದು ವಿಶಿಷ್ಟವಾದ ಔಷಧ. ರಾಜನಿಘಂಟು ಎಂಬ ವೈದ್ಯಗ್ರಂಥದಲ್ಲಿ ಕಟುರಸತ್ವ, ಶೀತತ್ವ. ಪುಷ್ಟಿ, ವೀರ್ಯ, ಬಲಪ್ರದತ್ವ, ಗುಲ್ಮ–ಶೂಲ ಕಫ–ಶ್ವಾಸ– ವಿಷ–ದೋಷ–ನಾಶಿತ್ತ್ವ ಇವುಗಳನ್ನು ಶಂಖದ ವೈದ್ಯಕೀಯ ಗುಣವೆಂದು ತಿಳಿಸಲಾಗಿದೆ.

ಭಾರತೀಯ ವಿಜ್ಞಾನಿ ಶ್ರೇಷ್ಠರಾದ ಜಗದೀಶ ಚಂದ್ರಬಸು ಇವರು ಶಂಖದ ವೈಶಿಷ್ಟ್ಯವನ್ನು ತಮ್ಮ ವೈಜ್ಞಾನಿಕ ಸಂಶೋಧನೆಯಿಂದ ಸಾಧಿಸಿ ತೋರಿಸಿದ್ದಾರೆ ಬ್ರಹ್ಮವೈವರ್ತ ಪುರಾಣದಲ್ಲಿ ಶಂಖದ ಉತ್ಪತ್ತಿಯ ಬಗೆಯ ಕಥೆ ಹೀಗಿದೆ.

ಶ್ರೀಕೃಷ್ಣನ ಆಪ್ತಗೆಳೆಯನಾದ ಸುದಾಮನು ರಾಧೆಯ ಶಾಪದ ಫಲವಾಗಿ ಶಾಪಗ್ರಸ್ತನಾಗಿ ಜನ್ಮಾಂತರದಲ್ಲಿ ರಾಕ್ಷಸನಾಗಿ ಹುಟ್ಟಿ 'ಶಂಖಚೂಡ' ಎಂಬ ಹೆಸರನ್ನು ಪಡೆದನು. ತನ್ನ ವಂಶದ ಸಾಮಾನ್ಯ ಧರ್ಮದಂತೆ ಈತನೂ ದೇವತೆಗಳ ಜನ್ಮಶತ್ರುವಾದನು. ಪತಿವ್ರತಾ ಶ್ರೇಷ್ಠಳಾದ 'ತುಳಸೀ' ಈತನ ಪತ್ನಿಯಾದಳು. ಈಕೆಯ ಪಾತಿವ್ರತ್ಯ ಪ್ರಭಾವದಿಂದ ಶಂಖಚೂಡನನ್ನು ಸಂಹರಿಸಲು ಯಾರಿಗೂ ಸಾಧ್ಯವಾಗಲಿಲ್ಲ. ಈತನ ಉಪಟಳವು ಎಲ್ಲೆಮೀರಿದಾಗ ಶ್ರೀಕೃಷ್ಣನು ಶಂಖಚೂಡನಂತೆ ರೂಪತಾಳಿ ತುಲಸೀ ದೇವಿಯ ಪಾತಿವ್ರತ್ಯವನ್ನು ಕೆಡಿಸಿದನು. ಆಗ ಶಂಕರನು ತನ್ನ ತ್ರಿಶೂಲದಿಂದ ಶಂಖಚೂಡನನ್ನು ಸಂಹರಿಸಿದನು.

ಸ ಶಿವಸ್ಯೇನ ಶೂಲೇನ
ದಾನವಸ್ಯಾಸ್ಥಿ ಜಾಲಕಂ
ಪ್ರೇಮ್ಣಾ ಚ ಪ್ರೇರಯಾಮಾಸ
ಲವಣೋದೇ ಚ ಸಾದರಂ
ಅಸ್ಥಿಭಿಃ ಶಂಖಚೂಡಸ್ಯ
ಶಂಖ ಜಾತಿರ್ಬಭೂವಹ

ಶಿವನಿಂದ ಲವಣ ಸಮುದ್ರದಲ್ಲಿ ಬೀಳಿಸಲ್ಪಟ್ಟ ಶಂಖಚೂಡನ ಅಸ್ಥಿಗಳೇ ಶಂಖದ ಜಾತಿಯಾಯಿತು.

ಯುಗಾಂತರದಲ್ಲಿ ಯುದ್ಧಸಿದ್ಧತೆಯ ಸೂಚನೆಯನ್ನು ಕೊಡುವ ಸಲುವಾಗಿ ಶಂಖವನ್ನು ಧ್ವನಿ ಮಾಡಲಾಗುತ್ತಿತ್ತು. ಪ್ರಾಯಃ ಪ್ರತಿಯೊಬ್ಬ ಸೇನಾನಾಯಕನೂ ತನ್ನದೇ ಆದ ಶಂಖವನ್ನು ಹೊಂದಿರುತ್ತಿದ್ದನಲ್ಲದೇ ಇದಕ್ಕೆ ಪ್ರತ್ಯೇಕವಾದ ಹೆಸರನ್ನು ಇಡುತ್ತಿದ್ದನು ಈ ವಿಷಯವನ್ನು,

ಪಾಂಚಜನ್ಯಂ ಹೃಷೀಕೇಶಃ
ದೇವದತ್ತಂ ಧನಂಜಯಃ

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ಪೌಂಡ್ರಂ ದಧ್ಮೌ ಮಹಾಶಂಖಂ
ಭೀಮಕರ್ಮಾ ವೃಕೋದರಃ
ಅನಂತ ವಿಜಯಂ ರಾಜಾ
ಕುಂತೀ ಪುತ್ರೋಯುಧಿಷ್ಠಿರಃ
ನಕುಲಃ ಸಹದೇವಶ್ಚ
ಸುಘೋಷ ಮಣಿಪುಷ್ಪಕೌ

ಎಂಬ ಭಗವದ್ಗೀತಾ ಶ್ಲೋಕಗಳು ಸ್ಪಷ್ಟ ಪಡಿಸುತ್ತಿವೆ.

'ಪಾಂಚಜನ್ಯ' ಶ್ರೀಮನ್ನಾರಾಯಣನ ಕೈಯಲ್ಲಿರುವ ಶಂಖ. ಇದರಿಂದಲೇ ಇವನಿಗೆ 'ಶಂಖೀ' ಎಂಬ ವಿಶೇಷಣವಿದೆ. ಈ ಶಂಖವನ್ನು ಶ್ರೀಮನ್ನಾರಾಯಣನು ಪಡೆದ ವಿವರವನ್ನು ತಿಳಿಸುವ ಕಥೆ ಇಂತಿದೆ.

ಶ್ರೀಮನ್ನಾರಾಯಣನ ಅವತಾರಿಯಾದ ಶ್ರೀಕೃಷ್ಣನು ಸಾಂದೀಪನಿ ಋಷಿಗಳ ಗುರುಕುಲದಲ್ಲಿ ಅಧ್ಯಯನಮಾಡಿ ಮುಗಿಸಿದ ನಂತರ ತಾನು ಏನು ಗುರುದಕ್ಷಿಣೆಯನ್ನು ಸಲ್ಲಿಸಬೇಕೆಂದು ಋಷಿವರ್ಯರನ್ನು ಪ್ರಶ್ನಿಸಿದ. ಅವರು ಮೃತನಾದ ತಮ್ಮ ಏಕಮಾತ್ರ ಪುತ್ರನನ್ನು ಹಿಂದಿರುಗಿಸಿ ಕೊಡುವಂತೆ ಹೇಳಿ, ಇದೇ ತಾವು ಆಶಿಸುವ ಗುರುದಕ್ಷಿಣೆ ಎಂದರು. ಗುರುಪುತ್ರನನ್ನು "ಪಂಚಜನ" ಎಂಬ ರಕ್ಕಸನು ಕೊಂಡು ಹೋಗಿ ಸಮುದ್ರದಲ್ಲಿ ಅಡಗಿದ್ದನು.

ಸಮುದ್ರಂ ಪ್ರತ್ಯುವಾಚೇದಂ
ದೈತ್ಯಃಪಂಚಜನೋ ಮಹಾನ್
ತಿಮಿರೂಪೇಣ ತಂ ಬಾಲಂ
ಗ್ರಸ್ತವಾನಿತಿಮಾಧವ

ಸಮುದ್ರನಿಂದ ಈ ವಿಷಯವನ್ನು ತಿಳಿದ ಶ್ರೀಕೃಷ್ಣನು ಪಂಚಜನ ದೈತ್ಯನನ್ನು ಸಂಹರಿಸಿ, ಅವನ ಕವಚರೂಪವಾದ ಪಾಂಚಜನ್ಯ ಶಂಖವನ್ನು ತನ್ನ ಒಂದು ಆಯುಧವನ್ನಾಗಿ ಮಾಡಿಕೊಂಡನು.

ಧ್ರುವ ಕುಮಾರನ ನಿಷ್ಠೆಗೆ ಮೆಚ್ಚಿ ಪ್ರತ್ಯಕ್ಷನಾದ ಶ್ರೀಮನ್ನಾರಾಯಣನು ಅವನ ಕಪೋಲಕ್ಕೆ ತನ್ನ ಶಂಖವನ್ನು ಸ್ಪರ್ಶಿಸಿ ಆತನನ್ನು ಮಹಾಜ್ಞಾನಿಯನ್ನಾಗಿ ಮಾಡಿದ ಎಂದು ಭಾಗವತದಲ್ಲಿ ಹೇಳಿದೆ.

ಭರತ ಶತ್ರುಘ್ನರು 'ಶಂಖ ಚಕ್ರ' ಅವತಾರಗಳೆಂದು ರಾಮಾಯಣಾಂತರದಲ್ಲಿ ಹೇಳಲಾಗಿದೆ. ಅಂತೆಯೇ ದಿವ್ಯಸೂರಿ ಪರಂಪರೆ ಪ್ರಥಮರಾದ 'ಶ್ರೀ ಸರೋಮುನಿ'–ಪೊಯ್ಗೈ ಆಳ್ವಾರ್‌ರವರೂ ಈ ಪಾಂಚಜನ್ಯ ಅಂಶದಿಂದ ಅವತರಿಸಿದವರೆಂದು ನಂಬಲಾಗಿದೆ.

ತುಲಾಯಾಂ ಶ್ರಾವಣೇ ಜಾತಂ
ಕಾಂಚ್ಯಾಂ ಕಾಂಚನವಾರಿಜಾತ್
ದ್ವಾಪರೇ ಪಾಂಚಜನ್ಯಾಂಶಂ
ಸರೋಯೋಗಿನ ಮಾಶ್ರಯೇ

ಎಂಬ ಧ್ಯಾನ ಶ್ಲೋಕವು ಮೇಲಿನ ಸಂಗತಿಯ ಸಮರ್ಥಕವಾಗಿದೆ.

ಪ್ರಾತಃ ಸ್ಮರಣೆಗೆ ಯೋಗವಾದ ಹಲವಾರು ಸ್ತೋತ್ರಗಳಲ್ಲಿ ಪಂಚಾಯುಧ ಸ್ತೋತ್ರವೂ ಒಂದು. ಈ ಸ್ತೋತ್ರದಲ್ಲಿ ಶ್ರೀಮನ್ನಾರಾಯಣನ ಆಯುಧ ಪಂಚಕಗಳಿಗೆ 'ಶರಣಂ ಪ್ರಪದ್ಯೇ' ಎಂದು ಪ್ರಪತ್ತಿಯನ್ನು ಸೂಚಿಸಲಾಗಿದೆ ಅದರಲ್ಲಿನ ಪಾಂಚಜನ್ಯ ಸ್ತುತಿ ಇಂತಿದೆ.

ವಿಷ್ಣೋರ್ಮುಖೋತ್ಥಾನಿಲ
ಪೂರಿತಸ್ಯ
ಯಸ್ಯಧ್ವನಿಃ ದಾನವದರ್ಪಹಂತಾ
ತಂ ಪಾಂಚಜನ್ಯಂ ಶಶಿ ಕೋಟಿ ಶುಭ್ರಂ
ಶಂಖಂ ಸದಾಹಂ ಶರಣಂ ಪ್ರಪದ್ಯೇ

ಶ್ರೀಮನ್ನಾರಾಯಣನ ಮುಖದಿಂದ ಹೊರಟ ಗಾಳಿಯಿಂದ ತುಂಬಿದ ಯಾವುದರ ಧ್ವನಿಯು ರಾಕ್ಷಸರ ಗರ್ವವನ್ನು ಅಡಗಿಸಿವುದೊ ಅಂತಹ ಕೋಟಿ ಚಂದ್ರರಂತೆ ಶುಭ್ರವಾದ ಪಾಂಚಜನ್ಯವನ್ನು ನಾನು ಸದಾ ಶರಣು ಹೋಗುತ್ತೇನೆ.

ತಾರತ್ವಂ ಯಸ್ಯ ಸಂಸ್ಥಾನೇ
ಶಬ್ದೇಚ ಪರಿದೃಶ್ಯತೇ
ಪ್ರಭೋಃ ಪ್ರಹರಣೇಂದ್ರಸ್ಯ
ಪಾಂಚಜನ್ಯಃ ಸ ಪಾತುವಃ

ಎಂದು ಕವಿತಾರ್ಕಿಕ ಕೇಸರಿಗಳಾದ ಶ್ರೀ ವೇದಾಂತ ದೇಶಿಕರು ಪಾಂಚಜನ್ಯದ ರಕ್ಷಣೆಯನ್ನು ಬೇಡಿದ್ದಾರೆ.

## ಪ್ರಾಣಿ ಪಕ್ಷಿ ಬಲಿಯ ನಿಷೇಧ ಕಾನೂನು

ಆಂಧ್ರಪ್ರದೇಶದ 1950 ರ ಪ್ರಾಣಿ ಪಕ್ಷಿ ಬಲಿ ನಿಷೇಧ ಕಾನೂನಿನ 3ನೇ ಕಲಮಿನನ್ವಯ ಯಾವುದೇ ವ್ಯಕ್ತಿಯೂ ಸಾರ್ವಜನಿಕ ಆರಾಧನೆಯ ಸ್ಥಳಗಳಲ್ಲಿ, ಧಾರ್ಮಿಕ ಆರಾಧನೆಯ ಸ್ಥಳಗಳಲ್ಲಿ ಅಥವಾ ಯಾವುದೇ ಧಾರ್ಮಿಕ ಮೇಳ ಮೆರವಣಿಗೆಗಳಲ್ಲಿ ಯಾಗಲೀ ಪ್ರಾಣಿ ಪಕ್ಷಿಗಳನ್ನು ಬಲಿ ನೀಡುವುದನ್ನು ನಿಷೇಧಿಸಲಾಗಿದ್ದು, ಅದೇ ಕಾನೂನಿನ 6 ನೇ ಕಲಮಿನನ್ವಯ ಈ ನಿಯಮವನ್ನುಲ್ಲಂಘಿಸಿದವರಿಗೆ ಮೂರು ತಿಂಗಳಿನಿಂದ ಐದು ತಿಂಗಳ ಸಾದಾಸಜೆ ಅಥವಾ ಮುನ್ನೂರು ರೂಗಳ ದಂಡ ಅಥವಾ ಎರಡನ್ನೂ ವಿಧಿಸಲಾಗುವುದು. ಹಾಗಾಗಿ ಪ್ರಾಣಿ ಪಕ್ಷಿ ಬಲಿಯನ್ನು ಕೋಳಿಜಗಳಗಳನ್ನು ತಡೆಯಲು ಕೈಗೊಳ್ಳತಕ್ಕದ್ದು.

ಜಿಲ್ಲಾಧಿಕಾರಿಗಳು ಹಬ್ಬ, ಉತ್ಸವಗಳಿಗೆ ಮೊದಲು ಅಧಿಕಾರಿ ಹಾಗೂ ಸಾರ್ವಜನಿಕರ ಸಭೆಗಳನ್ನು ಏರ್ಪಡಿಸಿ, ಪ್ರಾಣಿ ಪಕ್ಷಿ ಬಲಿಗಳನ್ನು ತಡೆಯಲು ಕ್ರಮಗಳನ್ನು ಕೈಗೊಳ್ಳಬೇಕೆಂದು ಬೇಡಲಾಗಿದೆ.

**ಹನುಮಂತರಾವ್**

**ಸರ್ಕಾರದ ಉಪಕಾರ್ಯದರ್ಶಿ, ಆಂಧ್ರಪ್ರದೇಶ.**

# ಜ್ಞಾನದಾಯಕ ದೀಪಾವಳಿ



"ತಮಸೋಮಾ ಜ್ಯೋತಿರ್ಗಮಯ"– ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆಗೆ ನಡೆಸು–ಎಂಬ ಉಪನಿಷದ್ವಾಕ್ಯದ ಸಾಂಕೇತಿಕ ಪ್ರಾದುರ್ಭಾವವೇ ದೀಪಾವಳಿ ಹಬ್ಬದ ಆಚರಣೆ. ಅಂದು ಎಲ್ಲೆಲ್ಲೂ ಸುಂದರವಾದ ನಾನಾ ನಮೂನೆಗಳಲ್ಲಿ ಮಾಡಿದ ಉರಿಯುವ ದೀಪಗಳನ್ನು ನೋಡುತ್ತೇವೆ. ಎಲ್ಲರ ಮನೆಯ ಮುಂದೂ ಅವರವರ ಶಕ್ತ್ಯಾನುಸಾರವಾಗಿ ತೈಲ ದೀಪಗಳನ್ನು ಹಚ್ಚಿಡುತ್ತಾರೆ. ದೀಪಾವಳಿ ಎಂದರೆ 'ದೀಪಗಳ ಗುಂಪು' ಎಂದರ್ಥ. ಅಂದು ಪ್ರಾರಂಭವಾದ ಈ ದೀಪೋತ್ಸವ ಈ ತಿಂಗಳ ಕೊನೆಯವರೆಗೂ ಮುಂದುವರಿಯುತ್ತದೆ. ಜಾತಿ ಮತ ಪಂಗಡಗಳ ಭೇದವಿಲ್ಲದೆ ಸರ್ವಧರ್ಮದವರೂ ಭಾರತದ ಅತ್ಯಂತ ಆಚರಿಸುವ ಹಬ್ಬಗಳಲ್ಲಿ ದೀಪಾವಳಿಯೂ ಒಂದು. ಶರದೃತುವಿನ ಇಂತಹ ಪ್ರಶಸ್ತ ವಾತಾವರಣವೇ ಜ್ಞಾನ ಜ್ಯೋತಿಯ ಪ್ರಕಾಶಕ್ಕೆ ಸೂಕ್ತವಲ್ಲವೇ? ದೀಪಾವಳಿಯ ಈ ದೀಪಗಳು ಜ್ಞಾನ ಜ್ಯೋತಿಯ ಸಂಕೇತ.

ನಾಲ್ಕು ದಿನಗಳ ಪರ್ಯಂತ ನಡೆಯುವ ಅತ್ಯಂತ ಹರ್ಷದಾಯಕ ಈ ಹಬ್ಬದಲ್ಲಿ ಅಶ್ವಯುಜ ಬಹುಳ ಚತುರ್ದಶಿಯಂದು ಆಚರಿಸುವ ಮೊದಲನೇ ಹಬ್ಬವೇ 'ನರಕ ಚತುರ್ದಶಿ'. ಇದನ್ನು 'ನೀರು ತುಂಬುವ ಹಬ್ಬ' ವೆಂತಲೂ ಕರೆಯುತ್ತಾರೆ. ನಮ್ಮಲ್ಲಿ ಆಚರಣೆಯಲ್ಲಿರುವ ಯಾವುದೇ ಹಬ್ಬಕ್ಕೆ ಒಂದು ದೈವೀಕ ಹಿನ್ನೆಲೆಯಿರುತ್ತದೆಂಬುದನ್ನು ಹೇಳಬೇಕಾಗಿಯೇ ಇಲ್ಲ. ಲೋಕ ಕಂಟಕನಾಗಿದ್ದ ನರಕಾಸುರನೆಂಬ ರಾಕ್ಷಸನನ್ನು ಶ್ರೀಕೃಷ್ಣ ಪರಮಾತ್ಮನು ಸಂಹಾರ ಮಾಡಿದ ದಿನವೇ ನರಕಚತುರ್ದಶಿ.

ನರಕಾಸುರನು ವರಾಹರೂಪಿ ನಾರಾಯಣ ಹಾಗೂ ಭೂದೇವಿಯರ ಅಂಶ ಸಂಜಾತನಾದರೂ ತನ್ನ ಕ್ರೂರಕರ್ಮಗಳಿಂದ ದೈತ್ಯನಾದ. ಇಂದ್ರಾದಿ ಅಷ್ಟದಿಕ್ಪಾಲಕರನ್ನು ಸೋಲಿಸಿ ಅವರನ್ನು ಪದಚ್ಯುತರನ್ನಾಗಿ ಮಾಡಿದ, ಬ್ರಹ್ಮನ ಮಗಳಾದ ಚತುರ್ದಶಿಯನ್ನೂ ಅಪಹರಿಸಿದ. ಷಟ್ದರ್ಶನಾದಿ ಹದಿನಾಲ್ಕು ವಿದ್ಯೆಗಳನ್ನೂ ತನ್ನ ವಶಪಡಿಸಿಕೊಂಡು ಲೋಕವನ್ನು ತಮಸ್ಸಿನಲ್ಲಿ ಕೆಡಹಿದ. ಈ ತಮಸ್ಸಿನಿಂದ ಜ್ಯೋತಿಯೆಡೆಗೆ ಪ್ರಪಂಚವನ್ನು ಕೊಂಡೊಯ್ಯುವ ಹೊಣೆ ಜಗತ್ಪಾಲಕನಾದ ಶ್ರೀಮನ್ನಾರಾಯಣ ಮೇಲೆ ಬಿದ್ದಿತು. ಆಗ ಶ್ರೀಕೃಷ್ಣ ಪರಮಾತ್ಮನು ಆತನನ್ನು ಕೊಂದು ಬ್ರಹ್ಮನ ಮಗಳಾದ ಚತುರ್ದಶಿಯನ್ನು ರಕ್ಷಿಸಿ ಲೋಕವನ್ನು ಸಂಹರಿಸಿದ. ಆ ರಾಕ್ಷಸನನ್ನು ಕೊಂದದ್ದು 'ಅಶ್ವಯುಜ ಬಹುಳ ಚತುರ್ದಶಿಯ' ರಾತ್ರಿಯಲ್ಲಿ. ಆದುದರಿಂದಲೇ ಇದಕ್ಕೆ 'ನರಕ ಚತುರ್ದಶಿ' ಎಂದು ಹೆಸರಾಯಿತು. ತಮಸ್ಸನ್ನು ತಮಸ್ಸಿನಲ್ಲೇ ಕೊಂದು ಲೋಕಕ್ಕೆ ಬೆಳಕನ್ನು ನೀಡಿದ ಪುಣ್ಯದಿನವಿದು.

ನರಕಾಸುರನು ಅಪೇಕ್ಷಿಸಿದ ಸಂತೋಷಾರ್ಥವಾಗಿ ಅಂದು ಬೆಳಗ್ಗೆ ಹಬ್ಬವನ್ನು ಮಾಡಿ ಊಟಮಾಡಿದ ನಂತರ ಬೆಳಗಿನ ಝಾವ ಅಭ್ಯಂಜನಸ್ನಾನವನ್ನು ಮಾಡುವ ಪದ್ಧತಿ ರೂಢಿಗೆ ಬಂದಿದೆ.

ರಾತ್ರೌ ಚಂದ್ರೋದಯ ಕಾಲೇ ನರಕ ಚತುರ್ದಶ್ಯಭ್ಯಂಗಃ–ಎಂಬ ವಾಕ್ಯವೂ ಇದೆ. ಅಭ್ಯಂಜನವೆಂದರೆ ಮೈಗೆ ಎಣ್ಣೆ ಸವರಿಕೊಂಡು ಸ್ನಾನಮಾಡುವುದು. ರಾಕ್ಷಸನು ಸತ್ತಿದ್ದಕ್ಕಾಗಿ ತಲೆಗೆ ಸೀಗೇಕಾಯಿ ಹಾಕಿ ತಲೆತೊಳೆದು ಕೊಳ್ಳುವುದೇ ಈ ಅಭ್ಯಂಜನದ ಸಂಕೇತ. ಅರುಣೋದಯಕ್ಕೆ ಸರಿಯಾಗಿ ಅಂದರೆ ಅಮಾವಾಸ್ಯೆಗ ಮುನ್ನ ಅಭ್ಯಂಜನವನ್ನು ತೀರಿಸಿಕೊಂಡು. ಮನೆಯಲ್ಲಿ ಎಲ್ಲರಿಗೂ ಆರತಿ ಎತ್ತಿ ಆರತಿಯ ನೀರನ್ನು ಮನೆಯ ಮುಂದೆ ಚೆಲ್ಲುತ್ತಾರೆ. ಇದು ಆ ಅಸುರನ ರಕ್ತದ ಸಂಕೇತ. ಒಟ್ಟಿನಲ್ಲಿ ದುಷ್ಟಶಕ್ತಿಯನ್ನು ಶಿಷ್ಟಶಕ್ತಿಯು ಕೊಂದದ್ದೇ ಈ ನರಕಚತುರ್ದಶಿ ಆಚರಣೆಯ ಮುಖ್ಯ ಸಂಕೇತ.

ಮೂರನೆಯ ದಿನದ ಅಮಾವಾಸ್ಯೆಯು ಇನ್ನೂ ಮಹತ್ವದ ದಿನ. ಅಂದು ಷೋಡಶ ಕಲಾ ಪರಿಪೂರ್ಣೆಯಾದ ಮಹಾಲಕ್ಷ್ಮಿಯ ಪೂಜೆ. ವಿಷ್ಣು ಪತ್ನಿಯಾದ ಲಕ್ಷ್ಮಿಯು ಐಶ್ವರ್ಯಕ್ಕೆ ಅಧಿದೇವತೆ. ಈ

ಶ್ರೀ ಕೆ. ಕೇಶವ ಮೂರ್ತಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/–ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/-) | — |
| ರಾತ್ರಿ ಗಂಟೆ | ರಾತ್ರಿ [illegible]–00 ರಿಂದ 8–30 | ರಾತ್ರಿ [illegible]–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

**ಪೇಷ್ಕಾರ್.**

ಐಶ್ವರ್ಯವು ಹಣದರೂಪದಲ್ಲೇ ಇರಬೇಕೆಂದೇನೂ ಇಲ್ಲ. ವಿದ್ಯೆ, ಕೀರ್ತಿ, ವೀರ್ಯ, ಜಯ, ಸತ್ಸಂತಾನ, ಧೈರ್ಯ, ಸಂಪತ್ತು, ಧಾನ್ಯ, ಸೌಖ್ಯ, ಭೋಗ, ಮೇಧಾ (ಬುದ್ಧಿ), ಸೌಂದರ್ಯ, ಗೌರವ, ಧರ್ಮ, ಆರೋಗ್ಯ ಮತ್ತು ದೀರ್ಘಾಯುಸ್ಸು–ಈ ಹದಿನಾರೂ ಮಹಾಲಕ್ಷ್ಮಿಯ ರೂಪ ವಿಶೇಷಗಳು. ಇದನ್ನೇ 'ಷೋಡಶಶ್ರೀ'–ಅಂದರೆ ಹದಿನಾರು ಸಂಪತ್ತುಗಳು ಎಂದು ನಮ್ಮ ಪೂರ್ವಜರು ಗುರುತಿಸಿದ್ದಾರೆ. ಷೋಡಶಶ್ರೀ ಸಮೃದ್ಧಿಯ ಅಪೇಕ್ಷೆಯೇ ಅಮಾವಾಸ್ಯೆಯ ರಾತ್ರಿಯ ಪೂಜೆಯ ಉದ್ದೇಶ.

ಈ ದಿನವು ಜೈನರಿಗೂ ಪವಿತ್ರವಾದ ದಿನ. ಮಹಾವೀರ ತೀರ್ಥಂಕರನ ನಿರ್ಯಾಣ ಹಾಗೂ ಆತನ ಪ್ರಿಯಶಿಷ್ಯ ಗೌತಮಗಣಧರನಿಗೆ ಕೇವಲಜ್ಞಾನಪ್ರಾಪ್ತಿಯಾದ ದಿನವೇ ಇದು. ಈ ಕಾರಣದಿಂದ ಜೈನರು ಇಂದು ಜ್ಞಾನಲಕ್ಷ್ಮಿಯ ಪೂಜೆಯನ್ನು ಮಾಡುತ್ತಾರೆ. ಕೆಲವರು ತಮ್ಮಲ್ಲಿರುವ ಧನಕನಕಗಳನ್ನು ರಾಶಿಹಾಕಿ ಅದನ್ನು ಪೂಜಿಸುವ ಸಂಪ್ರದಾಯವೂ ಇದೆ.

ಇದರ ಮಾರನೇ ದಿನವೇ ಕಾರ್ತಿಕ ಶುದ್ಧ ಪಾಡ್ಯ, ಬಲಿಪಾಡ್ಯಮಿ ಅಥವಾ ಗೋಕ್ರೀಡನ ಪ್ರತಿಪತ್. ಇದು ಈ ನಾಲ್ಕು ದಿನಗಳ ಹಬ್ಬದಲ್ಲಿ ಪ್ರಮುಖವಾದ ದಿನ. ಇದೇ ದೀಪಾವಳಿ. ಈ ದಿನ ಜನರು ನೂತನ ವಸ್ತ್ರಧಾರಣೆ ಮಾಡಿ ಮನೆಯನ್ನು ತಳಿರು ತೋರಣಗಳಿಂದ ಅಲಂಕರಿಸುತ್ತಾರೆ. ಪ್ರಾತಃಕಾಲ 'ಬೆನಕನಪೂಜೆ' ಈ ಹಬ್ಬದ ಒಂದು ವಿಶೇಷ. ಬೆನಕ ಗಣಪತಿಯ ಪ್ರತೀಕ ಮನೆಯ ಹಜಾರದಲ್ಲಿ ಒಂದು ಕಡೆ ಗೋಮಯ (ಹಸುವಿನ ಸಗಣಿ) ವನ್ನು ಚತುರಸ್ರಾಕಾರವಾಗಿ ತಟ್ಟಿ ಅದನ್ನು ಚೆಂಡು ಹೂವುಗಳಿಂದ ಅಲಂಕರಿಸುತ್ತಾರೆ. ಜತೆಗೆ ಸಣ್ಣ ಸಣ್ಣ ಬೆನಕಗಳನ್ನು ಮನೆಯ ಬಾಗಿಲಿನ ಇಕ್ಕೆಲಗಳಲ್ಲಿ ಇರಿಸುತ್ತಾರೆ ಇದು ಗೃಹರಕ್ಷಣೆಯ ಸಂಕೇತ.

ಹೆಣ್ಣು ಮಕ್ಕಳು ತಯಾರಿಸಿದ ಭಂಡಾರವನ್ನು ಒಡೆಯುವುದು ಗಂಡು ಮಕ್ಕಳಿಗೊಂದು ಸಂತಸ. ಸಿಹಿ ಮೋದಕದ ಒಳಗೆ

ಳ್ಳಿಯ ನಾಣ್ಯಗಳನ್ನು ಹಾಕಿ (ಇದೇ ಂಡಾರ) ಅದನ್ನು ಮನೆಯ ಮಹಾದ್ವಾರ ಹೊಸಿಲಿನ ಮಧ್ಯದಲ್ಲಿಟ್ಟು ಗಂಡು ಕ್ಕಳು ತಮ್ಮ ಬಲ ಮೊಣಕೈಯಿಂದ ಡೆಯುತ್ತಾರೆ. ಆಗ ಆ ನಾಣ್ಯಗಳು ಹೊರ ಬುತ್ತವೆ. ಅದನ್ನು ಎಲ್ಲರೂ ಸಮನಾಗಿ ಂಚಿ ಕೊಳ್ಳುತ್ತಾರೆ. ಭಂಡಾರವನ್ನು ಡೆದು ನೋಡುವ ಸಂಕೇತವಿದು. ಅರ್ಥಾತ್ ವಾಗಲೂ ತಮ್ಮ ಗೃಹದಲ್ಲಿ ಐಶ್ವರ್ಯವು ಲಸಿರಲಿ ಎಂಬುದೇ ಇದರ ಉದ್ದೇಶ.

ೃಷಿಕರು ಅಂದು ಗೋವು ಮತ್ತು ವೃಷಭ ಳನ್ನು ತೊಳೆದು ಅವುಗಳ ಕೊಂಬು ಹಾಗೂ ರಸುಗಳನ್ನು ಒರೆದು ಬಣ್ಣ ಹಚ್ಚಿ ೂಮಾಲೆ ಹಾಕಿ, ಕೌದಿಗಳನ್ನು ಹೊದ್ದಿಸಿ ೂಜಿಸುತ್ತಾರೆ. ಸಾಯಂಕಾಲ ಕೆಲವು ಕಡೆ ನೇಕ ರೀತಿಯ ಮೋಜಿನ ಸ್ಪರ್ಧೆಗಳನ್ನು ಏರ್ಪಡಿಸುತ್ತಾರೆ ಅಂದು ವೃಷಭ ಳಿಗೆ ಬಿಡುವಿನ ದಿನ. ಆದುದರಿಂದಲೇ ಈ ದಿನವನ್ನು 'ಗೋಕ್ರೀಡನ ಪ್ರತಿಪತ್' ಎಂದೂ ಕರೆಯುತ್ತಾರೆ. ಅಂದು ಹಬ್ಬದ ಶೇಷ ಊಟವಾದ ಮೇಲೆ ಸಾಯಂಸಂಧ್ಯಾ ಕಾಲ ಗೋಧೂಳಿಲಗ್ನದಲ್ಲಿ ವೈಭವವಾಗಿ ನಡೆಯುತ್ತದೆ, ಬಲೀಂದ್ರ ಪೂಜೆ.

ವಿಷ್ಣು ಭಕ್ತನಾದ ಪ್ರಹ್ಲಾದನ ಮೊಮ್ಮಗನೇ ಬಲಿಚಕ್ರವರ್ತಿ. ಈತ ದೈತ್ಯನಾದರೂ ತನ್ನ ತಾತನಂತೆಯೇ ಮಹಾದೈವ ಭಕ್ತ ಹಾಗೂ ದಾನಿ. ತನ್ನ ಬಾಹುಬಲದಿಂದ ತ್ರಿಲೋಕಗಳನ್ನೂ ಜಯಿಸಿದ್ದನು. ಯುದ್ಧದಲ್ಲಿ ದೇವತೆಗಳು ಈತನ ಮುಂದೆ ನಿಲ್ಲಲು ಅಳುಕುತ್ತಿದ್ದರು. ಜನರು ಈತನನ್ನೇ ದೇವರೆಂದು ಭಾವಿಸಿ ಪೂಜಿಸುತ್ತಿದ್ದರು. ಇಂದ್ರಾದಿ ದೇವತೆಗಳಿಗೆ ಪೂಜೆಯೇ ಇಲ್ಲದಂತಾಯಿತು. ದೇವತೆಗಳ ಪ್ರಾರ್ಥನೆಯಂತೆ ಈತನ ಸಂಹಾರಕ್ಕಾಗಿ ಶ್ರೀಮಹಾವಿಷ್ಣುವು ವಾಮನಾವತಾರವನ್ನು ತಾಳಿದ. ದಶಾವತಾರಗಳಲ್ಲಿ ಇದೂ ಒಂದು. 'ವಾಮನ' ಎಂದರೆ 'ಕುಳ್ಳ' ಎಂದರ್ಥ.

ತೇಜಃಪುಂಜ ಮುಖ ಮುದ್ರೆಯಿಂದ ಕಂಗೊಳಿಸುವ ವಾಮನ ಮೂರ್ತಿಯು ಬಲಿಯಲ್ಲಿಗೆ ಬಂದ.

"ಭವತಿ ಭಿಕ್ಷಾಂದೇಹಿ" ಎಂದ

ಬಲಿಯು 'ಏನು ಬೇಕು ವಟುವೇ" ಎಂದ ವಟುವು ಕೇವಲ ಮೂರು ಹೆಜ್ಜೆ ಭೂಮಿಯನ್ನು ಬೇಡಿದ. ಬಾಲಕನ ಬೇಡಿಕೆಯನ್ನು ಕೇಳಿದ ಬಲಿಗೆ ನಗು ಬಂತು.

"ಕೊಟ್ಟಿದ್ದೇನೆ, ನಿನ್ನ ಕಾಲುಗಳಿಂದಲೇ ಎಲ್ಲಿ ಬೇಕೋ ಅಲ್ಲಿ ಅಳೆದುಕೊ" ಎಂದ. ಈ ವಾಗ್ದಾನವೇ ಬೇಕಾಗಿತ್ತು ವಿಷ್ಣುವಿಗೆ. ಒಡನೆಯೇ ವಾಮನನು ತ್ರಿವಿಕ್ರಮನಾಗಿ ಬಳೆದ. ಭೂಮ್ಯಾಕಾಶಗಳೆರಡೂ ಒಂದಾಯಿತು. ತ್ರಿವಿಕ್ರಮನ ಮೊದಲನೇ ಹೆಜ್ಜೆಯು ಆಕಾಶವನ್ನು ತುಂಬಿತು. ಎರಡನೇ ಪಾದವು ಭೂಮಿಯನ್ನು ತುಂಬಿತು. ಮೂರನೆಯ ಹೆಜ್ಜೆಗೆ ಎಡೆಯೇ ಇರಲಿಲ್ಲ. ಆಗ ತ್ರಿವಿಕ್ರಮನು,

"ಮೂರನೇ ಹೆಜ್ಜೆಯನ್ನು ಎಲ್ಲಿಡಲಿ?'' ಎಂದ. ಬಲಿಚಕ್ರವರ್ತಿಯು ಆತನು ಭಗವಂತ ನೆಂಬುದನ್ನರಿತು,

"ನನ್ನ ತಲೆಯ ಮೇಲಿರಿಸು'' ಎಂದ. ಬಲಿಯ ತಲೆಯ ಮೇಲೆ ಇಟ್ಟ ವಿಷ್ಣು ಪಾದವು ಆತನನ್ನು ಪಾತಾಳಕ್ಕೆ ತುಳಿಯಿತು. ಪಾತಾಳಕ್ಕೆ ತುಳಿದ ತನ್ನ ಭಕ್ತನ ಅಂತಿಮ ವಾಕ್ಯವನ್ನು ನೆರವೇರಿಸಲೋಸುಗ ಆತನ ಮನೆಯ ಪ್ರತೀಹಾರಿಯಾದ ಮಹಾವಿಷ್ಣು. ಇಂದ್ರನಿಗೆ ಸಮಾನವಾದ ಐಶ್ವರ್ಯವನ್ನು ಪಡೆದು ಪಾತಾಳಕ್ಕೆ ಅಧಿಪತಿಯಾಗಿ ಚಿರಂಜೀವಿಗಳಾದ ಅಶ್ವತ್ಥಾಮ, ವ್ಯಾಸ ಹನುಮಂತ, ವಿಭೀಷಣ, ಕೃಪ, ಪರಶುರಾಮರ ಪಟ್ಟಿಯಲ್ಲಿ ಬಲಿಯೂ ಸೇರ್ಪಡೆಯಾದ.

ಅಶ್ವತ್ಥಾಮೋ ಬಲಿರ್ವ್ಯಾಸೋ
ಹನೂಮಾಂಶ್ಚ ವಿಭೀಷಣಃ |
ಕೃಪಃ ಪರಶುರಾಮಶ್ಚ
ಸಪ್ತೈತೇ ಚಿರಜೀವಿನಃ ||

ಅಂತೂ ಬಲಿಯು ಬಲೀಂದ್ರನಾಗಿ ಪೂಜಾರ್ಹನಾದ ದಿನವೇ ಈ ಬಲಿಪಾಡ್ಯಮಿ. ಬಲಿಯ ಕೀರ್ತಿ ಆಚಂದ್ರಾರ್ಕವಾಗುವಂತೆ ಮಾಡಿದ ಶ್ರೀಮಹಾವಿಷ್ಣು ಭಗವಂತನು ತನ್ನ ಭಕ್ತರನ್ನು ಉದ್ಧಾರಮಾಡುತ್ತಾನೆಂಬುದಕ್ಕೆ ಇದೊಂದು ನಿದರ್ಶನ.

ಬಲಿಪಾಡ್ಯಮಿಯು ಅನೇಕ ದೃಷ್ಟಿಯಿಂದ ಬಹು ಮಹತ್ವವಾದ ದಿನ. ಉತ್ತರಭಾರತ ವಿಕ್ರಮ ಶಕೆಯು ಆರಂಭವಾಗುವುದು ಬಲಿ ಪಾಡ್ಯಮಿಯ ದಿನದಿಂದಲೇ. ಅಂದರೆ ನಮಗೆ ಯುಗಾದಿ ಹಬ್ಬವಿದ್ದಂತೆ ಅವರಿಗೆ ಈ ದೀಪಾವಳಿ. ಅಂದು ನದಿ, ಕೆರೆ, ಕುಂಟೆ, ಸರೋವರಗಳಲ್ಲಿ ಸಣ್ಣ ಸಣ್ಣ ದೋಣಿ ದೀಪಗಳನ್ನು ತೇಲಿ ಬಿಡುತ್ತಾರೆ. ನದಿಯಲ್ಲೆಲ್ಲಾ ಪ್ರವಹಿಸುವ ಈ ದೀಪಗಳು ನಯನ ಮನೋಹರವಾದ ಒಂದು ದೃಶ್ಯ.

ಜೈನರಿಗೆ ಮಹಾವೀರ ಶಕೆಯು ಪ್ರಾರಂಭವಾಗುವುದೂ ಇಂದಿನಿಂದಲೇ. ಅಲ್ಲದೆ ಗುರ್ಜರ ದೇಶದವರಿಗೂ ಸಹ ಇಂದಿನಿಂದಲೇ ವರ್ಷಾರಂಭ.

"ಘೂರ್ಜರಾಣಾಂ ವತ್ಸರಾರಂಭಃ" ಎಂದು ಪಂಚಾಂಗದಲ್ಲೇ ಉಕ್ತವಾಗಿರುತ್ತದೆ.

ಬಲಿಪಾಡ್ಯಮಿಯ ಮಾರನೇ ದಿನವೇ 'ಸೋದರ ಬಿದಿಗೆ' ಇಂದು "ಭಗಿನೀಗೃಹೇ ಭೋಜನಂ ಪ್ರಶಸ್ತಂ"–ಅಂದರೆ ಅಣ್ಣ ತಮ್ಮಂದಿರು ತಮ್ಮ ತಮ್ಮ ಅಕ್ಕತಂಗಿಯರ ಮನೆಗೆ ಹೋಗಿ ಸಂತೋಷವಾಗಿ ಅವರನ್ನು

(24 ನೇ ಪುಟನೋಡಿ)



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ:

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ತುಳಸೀ ಪೂಜೆ

ವರ್ಷಂಪ್ರತಿ ಕಾರ್ತೀಕ ದ್ವಾದಶಿಯಂದು ಪೂಜೆಗೊಳ್ಳುವ, ಎಲ್ಲರ ಮನೆಯ ಬೃಂದಾವನಗಳಲ್ಲಿ ಕಂಗೊಳಿಸುವ ತುಳಸಿಯ ಮಹಿಮೆ ಅಪಾರ. ತುಳಸೀ ಗಿಡಕ್ಕೆ ಕೊಡುವಷ್ಟು ಗೌರವ, ಮಹತ್ವವನ್ನು ನಾವು ಇನ್ನಾವುದೇ ಗಿಡಕ್ಕೆ ಕೊಟ್ಟಿಲ್ಲ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹಿಂದೂಗಳ ಮನೆಯಲ್ಲಿ ಪೂಜೆಗೊಳ್ಳುತ್ತಿರುವ ಏಕಮಾತ್ರ ಸಸ್ಯವಿದು. ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದ ಕಾಲದಲ್ಲಿಯೇ ತುಳಸೀ ಪೂಜೆ ಆಚರಣೆಯಲ್ಲಿತ್ತು. ತುಳಸಿಯ ಹಿರಿಮೆ ಯುಗಯುಗಾಂತರಗಳಿಂದ ನಮ್ಮವರಿಗೆ ಅರಿವಾಗಿದ್ದಿತು. ತುಳಸಿ ಎಂದರೆ ಅತಿ ಶ್ರೇಷ್ಠವಾದ, ತುಲನೆಯಿಲ್ಲದ ಅಮೂಲ್ಯವಸ್ತು ಎಂದರ್ಥ. ಹರಿ ಭಕ್ತಿವಿಲಾಸದಲ್ಲಿ ಒಂದು ಶ್ಲೋಕ ಹೀಗಿದೆ.

ತುಳಸೀ ಮಂಜರೀ ಭಿರ್ಯಃ
ಕುರ್ಯಾತ್ ಹರಿಹರಾರ್ಚನಮ್
ಸಃನಗರ್ಭಗೃಹಂ ಯಾತಿ
ಮುಕ್ತಿಭಾಗೀ ಭವೇನ್ನರಃ

ಹರಿಹರನನ್ನು ತುಳಸೀ ದಳದಿಂದ ಪೂಜಿಸಿದರೆ ಪುನರ್ಜನ್ಮವಿಲ್ಲ, ಅವನಿಗೆ ಮೋಕ್ಷ ಲಭಿಸುವುದೆಂದು ಇದರ ಅರ್ಥ. ಅನೇಕ ತರದ ವಿಕಾರಗಳನ್ನು ದೂರಮಾಡುವ ಗುಣಗಳು ತುಳಸಿಯಲ್ಲಿ ಇರುವುದರಿಂದ ನಾವು ಅದನ್ನು ಒಂದು ಪವಿತ್ರವಾದ ಭಾವನೆಯಿಂದ ದೇವರಸ್ಥಾನ ಕೊಟ್ಟು ಬೆಳೆಸುತ್ತೇವೆ. ಪೂಜೆ – ಪುನಸ್ಕಾರಗಳಲ್ಲಿ ಉಪಯೋಗಿಸುತ್ತೇವೆ. ತುಳಸೀ ಕುಡಿಗಳ ಮಾಲೆಯು ಪೂಜೆಗೆ ಅತಿಶ್ರೇಷ್ಠವಾದುದು. ತುಳಸಿಯ ಗಿಡದಲ್ಲಿ ಹರಿ–ಹರರೂ, ದೇವತೆಗಳೂ, ಪಿತೃಗಳೂ ನೆಲೆಸಿದ್ದಾರೆಂಬ ಪುರಾತನ ನಂಬಿಕೆಯಿದೆ. ಮಹಾದೇವನನ್ನು ತುಳಸೀ ದಳದಿಂದ ಪೂಜಿಸಿದರೆ ಪಿತೃಗಳು ಸಂತೋಷಗೊಳ್ಳುತ್ತಾರೆ ಎಂದು ಬೃಹದ್ಧರ್ಮ ಪುರಾಣದಲ್ಲಿ ಹೇಳಿದೆ. ಪ್ರಾತಃಕಾಲ, ಸಾಯಂಕಾಲ ತುಳಸಿಯ ಮುಂದೆ ದೀಪ ಬೆಳಗುವರು. ಸ್ನಾನ ಮಾಡಿಯೇ ತುಳಸಿಯನ್ನು ಕೊಯ್ಯಬೇಕೆಂದಿದೆ. ಪವಿತ್ರವಾದ ತುಳಸಿಯನ್ನು ಕೈಯಲ್ಲಿ ಹಿಡಿದು ಸುಳ್ಳಾಡುವಂತಿಲ್ಲ. ಪ್ರಮಾಣಸ್ವೀಕಾರಕ್ಕೆ ತುಳಸಿಯನ್ನು ಉಪಯೋಗಿಸುವ ನಿದರ್ಶನಗಳಿವೆ. ತುಳಸಿಯನ್ನು ಕೀಳುವಾಗ ಅನೇಕರು ಈ ಶ್ಲೋಕವನ್ನು ಹೇಳಿ ಪ್ರಾರ್ಥಿಸುವರು.

ಮಾತಸ್ತುಲಸೀ ಗೋವಿಂದ
ಹೃದಯಾನಂದ ಕಾರಿಣಿ
ನಾರಾಯಣಸ್ಯ ಪೂಜಾರ್ಥಂ
ಚಿನೋಮಿ ತ್ವಾಂ ನಮೋಸ್ತುತೇ ||

ಹೇ ತುಳಸೀ ಮಾತೆಯೇ, ಗೋವಿಂದನಿಗೆ ಹೃದಯಾನಂದಕಾರಳೇ,ನಾರಾಯಣನ ಪೂಜೆಗಾಗಿ ನಾನು ನಿನ್ನನ್ನು ಕೀಳುತ್ತಿದ್ದೇನೆ. ನಿನಗೆ ನಮಸ್ಕರಿಸಿ ಕ್ಷಮಿಸು ಎಂದು ಬೇಡುತ್ತಿದ್ದೇನೆ.

ಕಾರ್ತಿಕ ಮಾಸದಲ್ಲಿ ಬರುವ ಉತ್ಥಾನ ದ್ವಾದಶಿಯು ಬೃಂದಾವನ ಪೂಜೆಗೆ ಹೆಸರಾದುದು. ಅಂದು ಶ್ರೀಕೃಷ್ಣ – ರುಕ್ಮಿಣಿಯರ ಮದುವೆ ನಡೆಯಿತೆಂದೂ ತುಳಸೀ ರೂಪಿಯಾದ ರುಕ್ಮಿಣಿಯನ್ನು ಆ ದಿನ ಪೂಜಿಸಬೇಕೆಂದೂ ಪದ್ಮಪುರಾಣದಲ್ಲಿ ಹೇಳಿದೆ. ಅಲ್ಲಿಯವರೆಗೆ ಹುಣಿಸೇಕಾಯಿ, ನೆಲ್ಲಿಕಾಯಿಗಳನ್ನು ತಿನ್ನಬಾರದೆಂದೂ ಆ ದಿನ ತುಳಸಿಯೊಡನೆ ನೆಲ್ಲಿಕೊಂಬೆಗೂ. ಹುಣಿಸೆ ಕೊಂಬೆಗೂ ಪೂಜಿಸಿ ನೆಲ್ಲಿಕಾಯಿಯ ದೀಪಗಳನ್ನೂ ಹಚ್ಚಿ ಆರತಿ ಎತ್ತುವರು. ಕಬ್ಬುಗಳಿಂದಲೂ, ಮಾವಿನ ತೋರಣಗಳಿಂದಲೂ ಸುಂದರವಾದ ಮಂಟಪ ತಯಾರಿಸಿ ದೀಪಗಳಿಂದ ಅಲಂಕರಿಸಿ ಸುಡು ಮದ್ದುಗಳನ್ನು ಸುಟ್ಟು ಸಂತೋಷಿಸುವರು. ಮಂಗಲಸೂತ್ರ, ಅರಿಶಿನ-ಕುಂಕುಮ, ಸೀರೆ. ಕುಪ್ಪುಸ ಇತ್ಯಾದಿಗಳನ್ನು ವಧುವಿನ ಸಲುವಾಗಿಯೂ, ಯಜ್ಞೋಪವೀತವನ್ನು ವರನ ಸಲುವಾಗಿಯೂ ಸಮರ್ಪಿಸಿ ಎಲ್ಲ ವಿಧಿ–ವಿಧಾನಗಳಿಂದ ಪೂಜಿಸುವರು. ಕಾರ್ತಿಕ ಮಾಸದಲ್ಲಿ ಪ್ರತಿ ದಿನ ತುಳಸಿಯನ್ನು ನೋಡಿ, ಸ್ಪರ್ಶಿಸಿ, ಧ್ಯಾನಿಸಿ, ನಮಿಸಿ ಪೂಜಿಸುವುದರಿಂದ ಒಂದು ಯುಗದಲ್ಲಿ ಮಾಡಿದ ಪಾಪವೆಲ್ಲ ಪರಿಹಾರವಾಗುವುದೆಂದು ಪದ್ಮಪುರಾಣದಲ್ಲಿ ಹೇಳಿದೆ. ವೃಂದೆ, ಬೃಂದಾವನಿ, ವಿಶ್ವಪೂಜಿತೆ, ವಿಶ್ವಪಾವನೆ, ಪುಷ್ಪಸಾರಾ, ಆನಂದಿನಿ, ತುಳಸೀ, ಕೃಷ್ಣ ಸಂಜೀವಿನಿ-ಈ ಎಂಟು ಹೆಸರುಗಳಿಂದ ತುಳಸಿಯನ್ನು ಪೂಜಿಸಿದರೆ ಅಶ್ವಮೇಧಯಾಗ ಮಾಡಿದ ಪುಣ್ಯಸಿಗುವುದು. ತುಳಸೀದಳವೊಂದನ್ನು ಕಾರ್ತೀಕ ಮಾಸದಲ್ಲಿ ದಾನ ಮಾಡಿದರೆ ಗೋದಾನ ಮಾಡಿದಷ್ಟೇ ಪುಣ್ಯ ಸಿಗುವುದು. ಸಾಯುವಾಗ ಕುಡಿಸುವ ನೀರಿನಲ್ಲಿ ತುಳಸೀದಳವಿದ್ದರೆ ವೈಕುಂಠ ಪ್ರಾಪ್ತಿಯಾಗುವುದೆಂದೂ, ತುಳಸೀ ಜಲದಲ್ಲಿ ಸ್ನಾನ ಮಾಡುವುದು ಮಹಾತೀರ್ಥ ಸ್ನಾನಕ್ಕೆ ಸಮಾನವಾದುದೆಂದು ನಂಬಿಕೆ ಇದೆ.

ತುಳಸೀ ಕಾನನಂ ಚೈವ
ಗೃಹೇ ಯಸ್ಯಾವ ತಿಷ್ಠತೇ |
ತದ್ ಗೃಹಂ ತೀರ್ಥಭೂತಂ ಹಿ
ನಯಾಂತಿ ಯಮ ಕಿಂಕರಾಃ ||

ಮನೆಯ ಸುತ್ತಲೂ ತುಳಸೀ ಉದ್ಯಾನವನ್ನು ಬೆಳೆಸಿದರೆ ಅಂತಹ ಮನೆ ಪರಿಶುದ್ಧವಾಗಿಯೂ, ಯಮಕಿಂಕರರ ಪ್ರವೇಶಕ್ಕೆ ಅಸ್ಪದವಿಲ್ಲದಂತಾಗಿಯೂ ಇರುತ್ತದೆ. ಎಂದು ಪದ್ಮೋತ್ತರ ಖಂಡಪುರಾಣದಲ್ಲಿ ಹೇಳಿದೆ. ಈ ರೀತಿ ತುಳಸಿಯ ಮಹಿಮೆ ಅಗಾಧವಾದುದು.

**ವಿಧಗಳು :—**

ವಿವಿಧ ಭಾಷೆಗಳಲ್ಲಿ ಹೆಚ್ಚಾಗಿ ತುಳಸಿ, ತುಲಸಿ ಎಂದೇ ಕರೆಯಲ್ಪಡುವ ತುಳಸಿಯನ್ನು ಬಿಳಿತುಳಸಿ, ಕರಿತುಳಸಿ ಹಾಗೂ ಕಾಡು ತುಳಸಿ ಎಂದು ಮೂರು ವಿಧವಾಗಿ

**ಶ್ರೀಮತಿ ಸುಮಿತ್ರಾ ಶಾನಭಾಗ**

ವಿಂಗಡಿಸಬಹುದು. ಎಲ್ಲ ವಿಧದ ತುಳಸಿಯ ಗುಣಗಳು ಹಿಂದೇ ರೀತಿಯಾಗಿರುವುವೆಂದು ಅನೇಕ ತಜ್ಞ ವೈದ್ಯರ ಅಭಿಪ್ರಾಯ.

## ಆಯುರ್ವೇದದಲ್ಲಿ ತುಳಸಿಯ ಸ್ಥಾನ:—

ಆಯುರ್ವೇದ ಗ್ರಂಥಕಾರರು ತುಳಸಿಯನ್ನು ಕ್ರಿಮಿನಾಶಕ, ದೂಷಿತವಾಯು ಶೋಧಕ, ಸರ್ವರೋಗಾಂತಕ ಎಂಬ ಮುಂತಾದ ವಿಶೇಷಣಗಳಿಂದ ಹೊಗಳಿರುವರು.

ತುಳಸಿಯ ವಿಷಯವಾಗಿ ಆಯುರ್ವೇದ ಶಾಸ್ತ್ರವು ಅನಂತಾನಂತ ಪ್ರಯೋಗಗಳನ್ನು ತಿಳಿಸಿವೆ. ಅದರಂತೆ ನಮ್ಮ ವೈದ್ಯರು ಪರೀಕ್ಷಿಸುತ್ತಲೂ ಇದ್ದಾರೆ. ತುಳಸಿಯಲ್ಲಿ 'ಥೈಮಾಲ್' ಎಂಬ ಕ್ರಿಮಿನಾಶಕ ವಸ್ತು ಇರುವುದರಿಂದ ಇದು ಚರ್ಮವ್ಯಾಧಿಯ ಮೇಲೆ ವಿಶೇಷ ಫಲಕಾರಿಯಾಗಿರುವುದಲ್ಲದೇ ಇದು ವಾತಾವರಣವನ್ನು ರೋಗಾಣುರಹಿತವನ್ನಾಗಿ ಮಾಡಬಲ್ಲದು ಎಂಬುದಾಗಿ ಕಲ್ಕತ್ತೆಯ ಖ್ಯಾತ ವೈದ್ಯ ಡಾ|| ಹೊರ ತಮ್ಮ ಪ್ರಯೋಗಗಳಿಂದ ಸ್ಥಿರಪಡಿಸಿರುವರು.

ದೆಹಲಿಯ ವಲ್ಲಭಾಯಿ ಪಟೇಲ ಚೆಸ್ಟ ಇನ್‌ಸ್ಟಿಟ್ಯೂಟಿನಲ್ಲಿ ವೈದ್ಯರು ನಡೆಸಿದ ಸಂಶೋಧನೆಗಳಿಂದ ತುಳಸಿಯಲ್ಲಿ ಕ್ಷಯ ರೋಗ ಬಾರದಂತೆ ತಡೆಗಟ್ಟುವ ಹಾಗೂ ಕ್ಷಯರೋಗ ಗುಣಪಡಿಸುವ ಘಟಕಗಳಿವೆಯೆಂದು ತಿಳಿದುಬಂದಿದೆ.

ಇಂತಹ ಹಲವಾರು ಸಂಶೋಧನೆಗಳು ಆಧುನಿಕ ಯುಗದಲ್ಲಿ ಅಲ್ಲದೇ ಸಹಸ್ರಾರು ವರ್ಷಗಳ ಹಿಂದೆಯೂ ನಮ್ಮಲ್ಲಿ ನಡೆದಿದ್ದವೆನ್ನಲು ಸುಶ್ರುತನು ಬರೆದ "ಸುಶ್ರುತ ಸಂಹಿತೆಯು" ಆಧಾರವಾಗಿದೆ.

ಸಾಮಾನ್ಯ ಕಾಹಿಲೆಗಳಾದ ನೆಗಡಿ, ಕೆಮ್ಮು, ಜ್ವರ, ವಾಂತಿ, ತಲೆಶೂಲೆ, ವಾಯು ಶೂಲೆ, ಹೊಟ್ಟೆ ಶೂಲೆ, ಕಜ್ಜಿ, ಅಂಗಾಂಗಗಳ ನೋವುಗಳು ತುಳಸಿಯಿಂದಾಗಿ ಕಡಿಮೆಯಾಗುವುದಲ್ಲದೇ ಕಠಿಣತರದ ರೋಗಗಳಾದ ಉಬ್ಬಸ, ಅಪಸ್ಮಾರ, ಕೆನ್ಸರ, ಕುಷ್ಠರೋಗದವರಿಗೂ ಕೂಡ ತುಳಸಿಯಿಂದ ತಯಾರಿಸಿದ ಔಷಧ ಶಮನಕಾರಿ. ತುಳಸಿ ಲೇಪನದಿಂದ ಮುಖದ ಕಾಂತಿ ವೃದ್ಧಿಸುವುದು. ಕ್ರಿಮಿನಾಶಕ, ವಿಷನಾಶಕ, ರೋಗಾಣು ನಾಶಕ ಈ ಮೂರು ಶಕ್ತಿಗಳು ತುಳಸಿಯಲ್ಲಿದ್ದು ಪ್ರಾಣರಕ್ಷಣೆಗೆ ದಕ್ಷ ಎನಿಸಿದೆ. ತುಳಸಿಯನ್ನೇ ಮುಖ್ಯ ಘಟಕವನ್ನಾಗಿ ಬಳಸಿ 300ಕ್ಕು ಹೆಚ್ಚು ಔಷಧಿಗಳು ತಯಾರಾಗುತ್ತಿವೆ. ಇಂದಿನ ಪರಿಸರ ಮಾಲಿನ್ಯಕ್ಕೂ ಕೂಡ ತುಳಸಿಯಿಂದ ಪರಿಹಾರ ಒದಗಿದೆ.

ಆರೋಗ್ಯ ರಕ್ಷಣೆಯಲ್ಲಿ ಮಹತ್ತರ ಪಾತ್ರ ವಹಿಸುತ್ತಿರುವ ತುಳಸಿಯನ್ನು ದೇವತೆಯ ಸ್ಥಾನದಲ್ಲಿರಿಸಿ ಪೂಜಿಸುತ್ತಿರುವ ಭಾರತೀಯರು ಮೂಢ ನಂಬಿಕೆಗಳಿಗೆ, ಅಂಧಶ್ರದ್ಧೆಯ ಕಟ್ಟುಪಾಡಿಗೆ ಒಳಗಾದಂತೆ ಅನಿಸುವುದಿಲ್ಲ. ಧಾರ್ಮಿಕ ಕಟ್ಟಳೆಯ ಜೊತೆಯಲ್ಲಿ ಆರೋಗ್ಯ ಭಾಗ್ಯವೂ ದೊರಕಲೆಂದು ತುಳಸೀ ಪೂಜೆ ರೂಢಿಯಲ್ಲಿ ಬಂದಿದ್ದಿರಬೇಕು.



# ಮಹಾದೇವಿ ವರ್ಮ

ಹಿಂದೀ ಸಾಹಿತ್ಯ ಲೋಕದ ಉಜ್ಜ್ವಲ ತಾರಾನಿವಹದಲ್ಲಿ ಮಹಾದೇವಿ ವರ್ಮಾ ಅವರ ಹೆಸರು ಹಿರಿದು. ಆರ್ಷೇಯ ಸಂಪ್ರದಾಯದಲ್ಲಿ ಮುಳುಗಿದ್ದರೂ ಆಧುನಿಕ ವಿದ್ಯಾಮಾನಗಳನ್ನು ಮೈಗೂಡಿಸಿ ಕೊಂಡು ಬೆಳೆದು ಹಿಂದೀ, ಸಾಹಿತ್ಯದ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದವರಲ್ಲಿ ಒಬ್ಬರು. ಅವರ ಮರಣ ದಿಂದಾಗಿ ಸಾಹಿತ್ಯ ಲೋಕ ಕ್ರಿಯಾಶೀಲ ಕಾರ್ಯಕರ್ತೆಯೊಬ್ಬಳನ್ನು ಕಳೆದು ಕೊಂಡಿದೆ. ಅಪರೂಪದ "ಸಾರಸ್ವತ ತಪಸ್ವಿನೀ" ಆದ ಅವರ ನೆನಪಿನಲ್ಲಿ ಈ ಲೇಖನ —ಸಂ॥

ಸಾಹಿತ್ಯ ಕ್ಷೇತ್ರದಲ್ಲಿ ಉತ್ಕೃಷ್ಟ ಕೃತಿ ‘ನ್ನು ರಚಿಸಿ ಶ್ರೇಷ್ಠ ಲೇಖಕಿಯರೆನಿಸಿ ಕೊಂಡಿರುವವರ ಸಾಲಿಗೆ ಸೇರುವಂತಹ, ಮುಖ ಪ್ರತಿಭೆಯ ಕವಯಿತ್ರಿ ಮಹಾ ವಿ ವರ್ಮಾ. ಇವರು ಹಿಂದಿ ಸಾಹಿತ್ಯ ಕದ ‘ಛಾಯಾವಾದಿಯುಗ’ ಪ್ರವರ್ತ ಯೂ ಆಗಿದ್ದರು.

ಉತ್ತರ ಪ್ರದೇಶದ ಫರೂಕಾಬಾದ್‌ನಲ್ಲಿ 07 ರಲ್ಲಿ ಗೋವಿಂದ ಪ್ರಸಾದ್‌ವರ್ಮಾ ಗೂ ಹೇಮಾರಾಣಿ ಅವರಿಗೆ ಜನಿಸಿದ ಕೈಕ ಪುತ್ರಿ. ತಂದೆ ಹೆಸರಾಂತ ವಿದ್ವಾಂಸ. ಹಾದೇವಿ ಕೂಡ ತಂದೆಯ ನೆರಳಿನಲ್ಲೇ ಳೆದು ತನ್ನತನವನ್ನು ರೂಪಿಸಿ ಕೊಂಡು ರು.

ಚಿಕ್ಕ ವಯಸ್ಸಿನಲ್ಲಿಯೇ ರೂಪನಾರಾ ಣ ಅವರೊಡನೆ ವಿವಾಹವಾದರೂ, ಪ್ರತಿ ನ್ವಿತೆಯಾದ ಮಹಾದೇವಿ ತಂದೆಯ ಮನೆ ನ್ನು ಬಿಟ್ಟು ಹೋಗದೇ, ತಮ್ಮ ವಿದ್ಯಾ ್ಯಾಸವನ್ನು ಮುಂದುವರಿಸಿದರು.

## ಆಧುನಿಕ ಮೀರಾ

ಈಕೆ ಕಲಿತದ್ದು ಇಂದೂರಿನಲ್ಲಿ. ಚಿಕ್ಕವ ಗಿದ್ದಾಗಿನಿಂದ ತಾಯಿ ಹೇಳಿಕೊಡುತ್ತಿದ್ದ ರಾಭಜನೆ ಮಹಾದೇವಿಯ ಮೇಲೆ ತೀವ್ರ ರಿಣಾಮ ಬೀರಿತ್ತು. ನಂತರ ಸೂರದಾಸ, ಲಸೀದಾಸರ ಗೀತೆಗಳ ಅಧ್ಯಯನ ಮಾಡಿ ರು. ಇವರ ಆದರ್ಶ ವ್ಯಕ್ತಿ ಮೀರಾ, ಗಾಗಿ ಇವರ ಕವಿತೆಗಳು ದಾರ್ಶನಿಕ ಂತನೆ ಉಳ್ಳದಾಗಿವೆ. ಈಕೆಯನ್ನು ಆಧು ಕ ಮೀರಾ ಎಂದೂ ಸಹ ಕರೆಯುತ್ತಾರೆ.

ಬಾಲ್ಯದಲ್ಲಿಯೇ ಸಂಗೀತ, ಚಿತ್ರಕಲೆಯ ಕ್ಷಣವನ್ನು ಪಡೆದರು. ವಿದ್ಯಾರ್ಥಿನಿಯಾಗಿ ದ್ದಾಗಲೇ ಕಾವ್ಯದ ಬಗೆಗೆ ಒಲವು. 1? ನೇ ಯಸ್ಸಿನಲ್ಲಿಯೇ ಕವಿತೆಯನ್ನು ರಚಿಸುತ್ತಿ ದ್ದರು. ಅಂದರೆ ಸ್ನಾತಕ ಪದವಿಯ ಮುನ್ನವೆ ನಿಹಾರ’ ಹಾಗೂ ‘ರಶ್ಮಿ’ ಎಂಬ ಎರಡು ಕವನ ಸಂಕಲನಗಳು ಬೆಳಕು ಕಂಡಿದ್ದವು.

1920 ರಲ್ಲಿ ಮಾಧ್ಯಮಿಕ ಶಾಲಾ ಶಿಕ್ಷಣ ಮುಗಿಸಿ, 1924 ರಲ್ಲಿ ಎನ್‌ಟ್ರೆನ್ಸ್ ಪರೀಕ್ಷೆಯಲ್ಲಿ ಆಗಿನ ಸಂಯುಕ್ತ ಪ್ರಾಂತ್ಯಕ್ಕೆ ಪ್ರಥಮ ಸ್ಥಾನ ಪಡೆದರು. ನಂತರ 1930 ರಲ್ಲಿ ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಹಾಗೂ ವೇದವನ್ನು ಕಲಿಯಲು ಅರ್ಜಿ ಹಾಕಿದರು. ಮೊದಲ ಬಾರಿಗೆ ಬ್ರಾಹ್ಮಣೇತರ-ಅದೂ ಮಹಿಳೆಯೊಬ್ಬಳು ಸಂಸ್ಕೃತ – ವೇದ ಕಲಿಯಲು ಅರ್ಜಿ ಹಾಕಿದ್ದು ಅಲ್ಲಿದ್ದ ಪಂಡಿತರಿಗೆಲ್ಲಾ ಕೋಪವನ್ನುಂಟು ಮಾಡಿತು. ತಮ್ಮಂಥ ಪಂಡಿತರು ಈ ಹುಡುಗಿಗೆ ಕಲಿಸುವುದೆಂದರೆ ಹೇಗೆ ಎಂದು ಆಕ್ಷೇಪವೆತ್ತಿದರು. ಆದರೆ ಮಹಾದೇವಿ ಅಷ್ಟೇ ದೃಢ ಹೃದಯಿಯಾದ್ದರಿಂದ, ಅವರು ಒಡ್ಡಿದ್ದ ಆಕ್ಷೇಪವನ್ನೆಲ್ಲ ಜಯಿಸಿ, ಕಾಲೇಜಿನಲ್ಲಿ ಪ್ರವೇಶ ಪಡೆದದ್ದು ಮಾತ್ರವಲ್ಲದೆ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಕಲಿಯಬೇಕೆಂಬ ಆಕಾಂಕ್ಷೆ, ಪ್ರತಿಭೆಯಿದ್ದರೆ ಎಂತಹ ಕಷ್ಟವನ್ನಾದರೂ ಎದುರಿಸ ಬಹುದೆಂಬುದಕ್ಕೆ ಮಹಾದೇವಿ ಉದಾಹರಣೆಯಾಗಿದ್ದಾರೆ.

ಇವರು ಮಹಿಳಾ ವಿದ್ಯಾಪೀಠದ ಪ್ರಾಚಾರ್ಯರಾಗಿ ನಂತರ ಉಪಕುಲಪತಿಯಾಗಿ ಸೇವೆ ಸಲ್ಲಿಸಿದರು. ಈ ವಿದ್ಯಾಪೀಠ ಇತರ ಶಾಲೆಯಂತಿರದೆ ಗಾಂಧೀಜಿ ಅವರ ಆದರ್ಶದ ಮಾದರಿ ಶಾಲೆಯಾಗಿತ್ತು. ಸಮಾಜದಲ್ಲಿ ತುಳಿಯಲ್ಪಟ್ಟಿರುವವರ ಶ್ರೇಯಸ್ಸಿಗಾಗಿ ಅವರ ಸರ್ವತೋಮುಖ ಅಭಿವೃದ್ಧಿಗಾಗಿ ಜ್ಞಾನ ನೀಡುವುದಷ್ಟೇ ಅಲ್ಲದೇ ಭಾರತೀಯ ಸಂಸ್ಕೃತಿಯನ್ನು ಕಲಿಸಿದರು. ಅದೇ ಮಹಾದೇವಿಯವರ ಧ್ಯೇಯವೂ ಆಗಿತ್ತು.

ಮಹಾದೇವಿ ಪತ್ರಿಕೋದ್ಯಮಿಯೂ ಆಹುದು. ‘ಚಾಂದ್’ ಪತ್ರಿಕೆಯ ಸಂಪಾದಕಿಯಾಗಿ ಶೋಷಣೆಗೆ ಒಳಗಾದ ಭಾರತೀಯ ಮಹಿಳೆಯರ ಬಗೆಗೆ ಬಹಳ ಮೊನಚಾದ ಲೇಖನಗಳನ್ನು ಬರೆದರು. ವಿಧವೆಯರು ಹಾಗೂ ಗೃಹಿಣಿಯರ ಬಗೆಗೆ ಇದ್ದ ಸಂಪ್ರದಾಯ ದಬ್ಬಾಳಿಕೆಯ ವಿರುದ್ಧ ಹೋರಾಡಿದರು.

ಹಿಂದೀ ಸಾಹಿತಿಗಳಿಗೆ ಪ್ರಕಾಶಕರಿಂದುಂಟಾಗುತ್ತಿದ್ದ ಅನ್ಯಾಯವನ್ನು ಬಗೆ ಹರಿಸುವ ಸಲುವಾಗಿ ‘ಸಾಹಿತ್ಯಕಾರ ಸಂಸದ್’ ಎಂಬ ಸಂಸ್ಥೆಯನ್ನು ಪ್ರಾರಂಭಿಸಿ ಅನೇಕರಿಗೆ ನ್ಯಾಯ ದೊರಕಿಸಿಕೊಟ್ಟರು. ಅಷ್ಟೇ ಅಲ್ಲದೆ ಈ ಸಂಸ್ಥೆಯ ಮೂಲಕ ಅನೇಕ ಕೃತಿಗಳನ್ನು ಪ್ರಕಟಿಸಿದರು. ಸಮಾಜ ಸೇವಕಿಯಾಗಿ ಇವರು ಗೈದ ಕಾರ್ಯ ಅಪಾರ

**ಶ್ರೀಮತಿ ಅಂದನೂರು ಶೋಭಾ**

1943 ರಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ನಿರಾಶ್ರಿತರಿಗೆ ಬಟ್ಟೆ, ಆಹಾರ, ಔಷದಿಗಳನ್ನು ಸಂಗ್ರಹಿಸಿ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದರು. ಇದು ಅವರ ಹೃದಯ ವೈಶಾಲ್ಯ ಹಾಗೂ ಅಪಾರ ಮಾನವ ಪ್ರೇಮದ ದ್ಯೋತಕವಾಗಿದೆ. ಅಲ್ಲದೇ ಹಿಂದೀ ಲೇಖಕಿಯರಿಂದಲೇ ಹಣ ಸಂಗ್ರಹಿಸಿ ನೆರವು ನೀಡಿದರು. ನಂತರ ಬರಹಗಾರರ ಬಳಗವನ್ನು ಪ್ರಾರಂಭಿಸಿ, 'ವಂಗ್‌ದರ್ಶನ್' ಎಂಬ ಕವನ ಸಂಕಲನವನ್ನು ಪ್ರಕಟಿಸಿದರು. ಇದರಿಂದ ಬಂದ ಹಣವನ್ನು 'ಅಕಾಲಪೀಡಿತ ಸಹಾಯತಾ ಕೋಶ'ಕ್ಕೆ ಸಮರ್ಪಿಸಿದರು. ಅಷ್ಟೇ ಅಲ್ಲದೆ 'ಲೇಖಕರನಿಧಿ'ಯ ಹೆಸರಿನಿಂದ ಆರ್ಥಿಕ ಸಹಾಯವನ್ನು ಒದಗಿಸಿದ್ದುಂಟು. 1962 ರಲ್ಲಿ ಚೀನಾದ ಆಕ್ರಮಣ ಸಮಯದಲ್ಲಿ ಎಲ್ಲರನ್ನೂ ಎಚ್ಚರಿಸುವಂತೆ 'ಹಿಮಾಲಯ' ಎಂಬ ಕವನ ಸಂಕಲನವನ್ನು .ಪ್ರಕಟಿಸಿದರು ಇವರು ರಚಿಸಿರುವ ಕೃತಿಗಳು ಸುಮಾರು 20. ಪ್ರತಿಯೊಂದು ವಿಷಯ ಹಾಗೂ ನಿರೂಪಣಾ ದೃಷ್ಟಿಯಿಂದ ಮೈಲುಗಲ್ಲುಗಳೇ.

ಇವರ 'ಯಾಮಾ' ಕೃತಿಗೆ ಭಾರತದಲ್ಲೇ ಅತ್ಯುತ್ಕೃಷ್ಟವಾದ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿ 1982 ರಲ್ಲಿ ದೊರೆತಿದೆ. ಈ ಕೃತಿ ನಿಹಾರ್ (1924) ರಶ್ಮಿ (1928), ನೀರಜಾ (1931) ಹಾಗೂ ಸಾಂಧ್ಯಗೀತ (1936) ನಾಲ್ಕು ಸಂಕಲನಗಳ ಒಟ್ಟು 185 ವೈವಿಧ್ಯಮಯ ಗೀತೆಗಳನ್ನೊಳಗೊಂಡಿದೆ. ವೇದನೆ, ದೀನರ ಬಗೆಗೆ ಅನುಕಂಪ, ದುಃಖ, ಪೀಡನೆ, ಉಪನಿಷದ್ ಮತ್ತು ದಾರ್ಶನಿಕ ಛಾಯೆ, ಪ್ರಕೃತಿ ವರ್ಣನೆ, ಪ್ರೇಮದ ಸಂಕೇತ ಹಾಗೂ ಪ್ರತಿಮೆಗಳನ್ನು ಈ ಸಂಗ್ರಹದ ಕವನಗಳಲ್ಲಿ ಕಾಣಬಹುದು. ಸಂತೋಷದ ಬುಗ್ಗೆಗಿಂತ ದುಃಖತಪ್ತೆಯಾಗಿ ಹೊಮ್ಮಿದ ಕವನಗಳೇ ಹೆಚ್ಚು.

ಮಹಾದೇವಿ ಗೀತರಚನಕಾರರು, ಗದ್ಯ ಲೇಖಕಿಯಷ್ಟೇ ಅಲ್ಲದೆ, ಅತ್ಯುತ್ತಮ ಚಿತ್ರಕಾರರೂ ಹೌದು. ನಿದರ್ಶನಕ್ಕೆ ಇವರ ಸಂಕಲನಗಳಾದ 'ದೀಪಶಿಖಾ' ಮತ್ತು 'ಯಾಮಾ' ಕೃತಿಗಳಲ್ಲಿ ಚಿತ್ರಗಳನ್ನು ನೋಡಬಹುದು. ಈ ಚಿತ್ರಗಳು ಮನಸ್ಸಿಗೆ ಆಹ್ಲಾದವನ್ನುಂಟು ಮಾಡುತ್ತವೆ. ಕಾವ್ಯಕಲೆ, ಚಿತ್ರಕಲೆ ಹಾಗೂ ಸಂಗೀತಕಲೆ ಇವರಲ್ಲಿ ಸಂಗಮಗೊಂಡಿತ್ತು. ಇವರ ಅತ್ಯಂತ ಪ್ರಸಿದ್ಧವಾಗಿರುವ ಗದ್ಯ ಕೃತಿಗಳೆಂದರೆ 'ಶೃಂಖಲಾ ಕೀ ಕಡಿಯಾ' ಹಾಗೂ 'ಅತೀತ ಕೇ ಚಲಚಿತ್ರ' ಇವರ ವಿಮರ್ಶನಾ ಸಾಮರ್ಥ್ಯಕ್ಕೆ ಮಹಾದೇವಿಕಾ ವಿವೇಚನಾತ್ಮಕ ಗದ್ಯ–ಎಂಬ ಕೃತಿಯನ್ನು ನೋಡಬಹುದು.

ಮಹಾದೇವಿಯವರಿಗೆ ಋಗ್ವೇದ, ಉಪನಿಷದ್, ರಘುವಂಶ ಹಾಗೂ ಉತ್ತರರಾಮ ಚರಿತೆ ಪ್ರಿಯವಾದ ಗ್ರಂಥಗಳು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವಕ್ಕೆ ಒಳಗಾದ ಸಾಹಿತಿ ಅಷ್ಟೇ ಅಲ್ಲದೆ ಪ್ರಾಂತೀಯ ಭಾಷೆಗಳನ್ನು ಬಿಟ್ಟು ಹಿಂದೀ ಭಾಷೆಯನ್ನು, ರಾಷ್ಟ್ರಭಾಷೆಯನ್ನಾಗಿ ಮಾಡುವುದು ಸರಿಯಲ್ಲವೆನ್ನುವ ಅಭಿಪ್ರಾಯವುಳ್ಳವರಾಗಿದ್ದರು. ಇವರು ಉತ್ತರ ಪ್ರದೇಶ ವಿಧಾನ ಪರಿಷತ್ತಿಗೆ 6 ವರ್ಷಗಳ ಕಾಲ ಸದಸ್ಯೆಯಾಗಿ ಸೇವೆ ಸಲ್ಲಿಸಿದ್ದಾರೆ.

ಮಹಾದೇವಿಯವರದು ತೀರಾ ಸರಳವಾದ ನಿರಾಡಂಬರ ಜೀವನ. ಬಹಳ ಶಿಸ್ತಿನ ಪ್ರಾಚಾರ್ಯರು ಮಾತ್ರವಾಗಿರದೆ ಶಾಲೆಯ ಎಲ್ಲಾ ವಿದ್ಯಾರ್ಥಿನಿಯರಿಗೂ ಪ್ರೀತಿಯ ಅಕ್ಕಳೂ (ಜೀಜೀ) ಆಗಿದ್ದರು; ಬಹಳ ವಾತ್ಸಲ್ಯಮಯಿ. ಎಷ್ಟೇ ಕಟ್ಟುನಿಟ್ಟಾಗಿದ್ದರೂ ಹೃದಯ ವಿಶಾಲವಂತಿಕೆಯಿಂದ ಕೂಡಿದ ಸರಳ ವ್ಯಕ್ತಿ. ಉತ್ಸಾಹದ ಚಿಲುಮೆ ಇವರ ಸರಳತೆಗೆ ದ್ಯೋತಕವೆಂದರೆ ಇವರೊಂದೂ ಕನ್ನಡಿಯನ್ನು ಬಳಸುತ್ತಿರಲಿಲ್ಲ. ಮಲಗುತ್ತಿದ್ದುದೂ ಸಹ ಒಂದು ಹಲಗೆಯ ಮೇಲೆ, ಮಾತ್ರ ನಿದ್ರಿಸುತ್ತಿದ್ದುದು ಸಹ ಬಹಳ ಕಡಿಮೆ ಸಮಯ. ಉಡುವು ಬಿಳೀ ಖಾದಿ ಸೀರೆ.

ಇವರ ಬಹುಮುಖ ಸೇವೆಗಾಗಿ 'ಸೆಕ್ಸಾರಿಯಾ' (1934) ಮತ್ತು 'ಮಂಗಲಾ ಪ್ರಸಾದ್' ಪುರಸ್ಕಾರ (1949) ದೊರೆತಿದೆ. ಭಾರತ ಸರಕಾರವು 1956 ರಲ್ಲಿ ಪದ್ಮಭೂಷಣ ಬಿರುದನ್ನು ನೀಡಿ ಗೌರವಿಸಿತು. 1979 ರಲ್ಲಿ ಉಜ್ಜಯಿನಿಯ ವಿಶ್ವವಿದ್ಯಾಲಯ ಡಿಲಿಟ್ ಪದವಿ ನೀಡಿಸನ್ಮಾನಿಸಿದೆ. 1982 ರಲ್ಲಿ ಭಾರತದಲ್ಲೇ ಅತ್ಯಂತ ಮಹತ್ವದ ಪ್ರಶಸ್ತಿಯಾದ ಭಾರತೀಯ ಜ್ಞಾನಪೀಠ ಪ್ರಶಸ್ತಿ ಹಾಗೂ 1983 ರಲ್ಲಿ 'ಭಾರತ ಭಾರತಿ ಪುರಸ್ಕಾರ' ದೊರೆತಿವೆ. ★

---

( 19ನೇ ಪುಟದಿಂದ)
ಹರಿಸಿ, ಇಲ್ಲವೇ ನಮಸ್ಕರಿಸಿ ಬರುವ ವಿನವಿದು. ಅಕ್ಕತಂಗಿಯರಿರುವವರು ಅವಶ್ಯಕವಾಗಿ ಅವರವರ ಮನೆಗೆ ಹೋಗಿ ಸಂತೋಷಚಿತ್ತರಾಗಿ ಭೋಜನಮಾಡಿ ತಮ್ಮ ಭಗಿನಿಯರಿಗೆ ಮುಯ್ಯ ಕೊಟ್ಟು ಬರಬೇಕು. ಅಂದು ಹೆಂಡತಿಯ ಕೈಯಿಂದ ಊಟಮಾಡುವುದು (ಅಕ್ಕತಂಗಿಯರಿದ್ದು) ಮಹಾದೋಷವೆಂದು ಹೇಳಿದೆ. ಅಂದು ಅಕ್ಕ ತಂಗಿಯರು ತಮ್ಮ ಅಣ್ಣ ತಮ್ಮಂದಿರಿಗೆ ರಾಖಿ ಕಟ್ಟುವ ಸಂಪ್ರದಾಯವು ಉತ್ತರ ಭಾರತದಲ್ಲಿದೆ. ತಮ್ಮ ಸಹೋದರನು ರಾಷ್ಟ್ರವೀರನಾಗಲು ಬದ್ಧಕಂಕಣನಾಗಲಿ ಎಂಬುದೇ ಇದರ ಸಂಕೇತ.

ಹೀಗೆ ನರಕ ಚತುರ್ದಶಿಯಿಂದ ಆರಂಭವಾದ ಈ ನಾಲ್ಕುದಿನಗಳ ದೀಪಾವಳಿಯು ಸೋದರ ಬಿದಿಗೆಯೊಂದಿಗೆ ಮುಕ್ತಾಯವಾಗುತ್ತದೆ. ಆದರೆ ದೀಪಗಳು ಮಾತ್ರ ಪ್ರತಿದಿನ ಸಾಯಕಾಲ ಎಲ್ಲರ ಮನೆಯ ಮುಂದೂ ಕಾರ್ತೀಕ ಬಹುಳ ಅಮಾವಾಸ್ಯೆಯವರೆಗೂ ರಂಜಿಸುತ್ತಿರುತ್ತದೆ. ಅಮಾವಾಸ್ಯೆಯಂದು ಶಿವದೀಪೋತ್ಸವವೂ ಮತ್ತು ವಿಷ್ಣು ದೇವಾಲಯಗಳಲ್ಲಿ ವಿಷ್ಣುದೀಪೋತ್ಸವವೂ ಆಚರಿಸಲ್ಪಡುತ್ತದೆ. ಇದಕ್ಕೆ ಲಕ್ಷ ದೀಪ ಅಮಾವಾಸ್ಯೆ ಎಂದೇ ಹೆಸರು–ಕಾರಣ ಅಂದು ಲಕ್ಷ ದೀಪಗಳನ್ನೇ ಹಚ್ಚುತ್ತಾರೆ.

ಕಾರ್ತೀಕ ಸೋಮವಾರಗಳಲ್ಲಿ ದೇವಾಲಯಗಳಲ್ಲಿ 'ದೀಪಾರಾಧನೆ' ಎಂಬ ವಿಶೇಷ ಪೂಜೆಯೇ ನಡೆಯುತ್ತದೆ. ಆ ದಿನ ದೇವರ ಮುಂದೆ ಅನೇಕ ದೀಪಗಳನ್ನು ಹತ್ತಿಸಿ ದೇವರಿಗೆ ಮಹಾಮಂಗಳಾರತಿ ಮಾಡಿ ಪ್ರಸಾದವನ್ನು ವಿನಿಯೋಗಿಸುತ್ತಾರೆ.

ಒಟ್ಟಿನಲ್ಲಿ ಶರತ್ಕಾಲದಲ್ಲಿ ಬರುವ ಈ ಹಬ್ಬವು ಎಲ್ಲರನ್ನೂ ಆನಂದದಲ್ಲಿ ಮುಳುಗಿಸುತ್ತದೆ. ಹಾಗೂ ಭಕ್ತಿ ಭಾವವನ್ನು ಉಂಟು ಮಾಡುತ್ತದೆ. ತೈಲಜ್ಯೋತಿಯ ಈ ದೀಪಾವಳಿಯು ಸರ್ವರಲ್ಲಿಯೂ ಜ್ಞಾನಜ್ಯೋತಿಯನ್ನು ಬೆಳಗಲಿ. ★

# ಶ್ರೀ ರಾಮಕೃಷ್ಣ ಪರಮಹಂಸರ ದೃಷ್ಟಿಯಲ್ಲಿ ಸ್ತ್ರೀ

ಭಾರತೀಯ ಸಂಸ್ಕೃತಿಯ ಆಧ್ಯಾತ್ಮ ಸರದ ರಾಜಹಂಸವಾದ ಶ್ರೀರಾಮಕೃಷ್ಣ ಮಹಂಸರು ಯೋಗಿಗಳಿಗೆ ಯೋಗಿ ಗಿ, ಸಾಧಕರಿಗೆ ಸಾಧಕರಾಗಿ, ಜ್ಞಾನಿ ಗೆ ಜ್ಞಾನಿಗಳಾಗಿದ್ದರು. ಅಷ್ಟೇ ಕೆ ತ್ತಮ ಅಧಮ ಎಂಬ ಜಾತಿ ಭೇದವಿಲ್ಲದೆ, ಪುರುಷರೆಂಬ ಲಿಂಗಭೇದ ಮಾಡದೆ ಷರಲ್ಲಿ ಕಂಡ ದೈವಭಾವವನ್ನೇ ಸ್ತ್ರೀ ರಲ್ಲೂ ಕಂಡು, ಅವರನ್ನು ಮಾತೆಯೆಂದು ಸಿ ಗೌರವಿಸಿದ ಮಹಾನ್ ದ್ರಷ್ಟಾರ ದ್ದರು.

ಸಾಮಾನ್ಯವಾಗಿ ಸಂನ್ಯಾಸಿಗಳು "ಕಾಂ " ವನ್ನು ತುಚ್ಛೀಕರಿಸಿ ನೋಡುವಂತೆ ಯನ್ನೂ ತುಚ್ಛೀಕರಿಸಿ ನೋಡುತ್ತಾರೆ. ರ ಮುಖವನ್ನು ನೋಡಲು ಅಂಜುತ್ತಾರೆ ರ ನೆರಳಿಗಂತೂ ಮತ್ತೂ ಅಂಜುತ್ತಾರೆ. ರೆ ಶ್ರೀ ರಾಮಕೃಷ್ಣ ಪರಮಹಂಸರು ಯನ್ನು ಜಗನ್ಮಾತೆ ಎಂದು ಸಾರಿ, ಯನ್ನು ಮಾತೃಸ್ಥಾನದಲ್ಲಿರಿಸಿ ಪೂಜಿಸಿ ರವಿಸಿದ್ದಾರೆ. ಆ ಸ್ತ್ರೀದೇವಿಯ ಚರಣ ಗೆ ಶರಣುಹೋಗಿದ್ದಾರೆ. ಅವರ ದೃಷ್ಟಿ ಲ್ಲಿ ಕಾಮಿನೀ ತ್ಯಾಗವೆಂದರೆ ಕೇವಲ ಹದ ತ್ಯಾಗ ಎಂದಷ್ಟೇ ಅರ್ಥ. ಅದ್ದ ವಲೇ ಅವರು ಸ್ತ್ರೀಯನ್ನು ಮಾತೆಯೆಂದು ಸ್ಕರಿಸಿದ್ದು. ಸಂನ್ಯಾಸ ಜೀವನದಲ್ಲಿ ಯು ಅತ್ಯಗತ್ಯವೆಂದು ಜಗತ್ತಿಗೆ ರಿಸಿಕೊಟ್ಟರು. ಹೆಣ್ಣನ್ನು ಹಂಗಿಸುತ್ತಿ ರ ಬಾಯಿ ಮುಚ್ಚಿಸಿದರು. ಕೈ ಹಿಡಿದ ಭಾಗ್ಯವತಿಯನ್ನು ಮಾತೆಯಾಗಿ ಆರಾಧಿ ರು. ಹೆಣ್ಣಾದ ಭೈರವೀ ಬ್ರಾಹ್ಮಣಿ ನ್ನು ಗುರುವಾಗಿ ಸ್ವೀಕರಿಸಿದರು. ಯೋಗಿನ್ ಮಾ, ಗೋಲಾಪ್‌ಮಾ, ಗೌರಿ ಸಿ, ಅಘೋರಮಣಿದೇವಿ ಮುಂತಾದ ಯರನ್ನು ಪ್ರಿಯಶಿಷ್ಯರಾಗಿ ಸ್ವೀಕರಿಸಿ ು. ಹೆಂಗಸರನ್ನು ತಾಯಂದಿರಾಗಿ ಡು ಸ್ತ್ರೀ ಸಮೂಹಕ್ಕೆ ಹಿಂದು ವಿಶೇಷ ದ ಗೌರವವನ್ನು ತಂದುಕೊಟ್ಟ ಜ್ಞಾನಿ ಲ್ಲಿ ಇವರೇ ಆದಿಪುರುಷರು.

"ಸ್ತ್ರೀಯನ್ನು ಜಗನ್ಮಾತೆಯಾಗಿ ಕಾಣು"

ಶ್ರೀ ರಾಮಕೃಷ್ಣ ಪರಮಹಂಸರು ಉತ್ತಮೋತ್ತಮರಾದ ಭಾವಸಾಧಕರು. ಅವರಿಗೆ ದಾಸ್ಯಭಾವ, ಸಖ್ಯಭಾವಗಳ ಸಾಧನೆಯಲ್ಲಿ ಇದ್ದ ನಿಷ್ಠೆಯೇ 'ಮಧುರ ಭಾವ'ದ ಸಾಧನೆಯಲ್ಲೂ ಇತ್ತು. ಶ್ರೀಕೃಷ್ಣನನ್ನು ಸಾಕ್ಷಾತ್ಕಾರ ಪಡಿಸಿಕೊಂಡ ಅವರು ರಾಧೆಯ ಭಾವವನ್ನು ತಮ್ಮಲ್ಲಿ ಆರೋಪಿಸಿಕೊಂಡು ಹೆಂಗಸರಂತೆ ಉಡುಗೆ – ತೊಡುಗೆಗಳನ್ನು ತೊಟ್ಟು, ರಾಧೆಯ ಅಪರಾವತಾರವೇ ಆದರು. ನಡೆ–ನುಡಿಯಲ್ಲಿ ಸ್ತ್ರೀಯಂತೆ ಮೈಮನ ತಳೆದು ಭಕ್ತಿಸಾಗರದಲ್ಲಿ ಮುಳುಗಿದರು. ಇದನ್ನರಿತ ಮಹಿಳಾಮಣಿಯರು ಸ್ವಾಮೀಜಿಯವರ ಸಮೀಪವರ್ತಿಗಳಾಗಲು ಸಹಕಾರಿಯಾಯಿತು. ಬಾಹ್ಯಕ್ಕೆ ರಾಧೆಯಾಗಿ ಅಂತರಂಗದಲ್ಲಿ ಮಹಾಜ್ಞಾನಿಯಾಗಿರುವ ಅವರ ಮಹಾನ್‌ಗುಣಕ್ಕೆ ಸ್ತ್ರೀಕೋಟಿಯೇ ಅವರ ಚರಣಗಳಲ್ಲಿ ಶರಣಾಗತಿಯನ್ನು ಹೊಂದಿತು.

ಕಾಮಿನಿ ತಿರಸ್ಕಾರವೆಂದರೆ ಅವರ ದೃಷ್ಟಿಯಲ್ಲಿ ಕೇವಲ 'ಕಾಮಕ್ಕೆ' ತಿರಸ್ಕಾರವಷ್ಟೆ! "ಸ್ತ್ರೀ" ತಿರಸ್ಕಾರವಲ್ಲ. "ಸ್ತ್ರೀಯನ್ನು ಜಗನ್ಮಾತೆಯಾಗಿ ಕಾಣು" ಎಂದು ನುಡಿದು, ಅದರಂತೆಯೇ ನಡೆದು ಬಾಳಿದರು. ಅವರು ಲತೆಯಂತೆ ಬಳುಕುವ, ಸೌಂದರ್ಯ ಕಡಲಲ್ಲಿ ಮೂರ್ತಿವೆತ್ತ ತಮ್ಮ ಮಡದಿ ಶ್ರೀಮಾತೆ ಶಾರದಾದೇವಿಯನ್ನು ಹೊರಗಣ್ಣಿನಿಂದ ನೋಡದೆ ಒಳಗಣ್ಣಿನಿಂದ ನೋಡಿ ಮಾತೆಯಾಗಿ ಸ್ವೀಕರಿಸಿದರು. ಕಾಮದ ಬೊಂಬೆಯಾಗಿ ಕಾಣದೆ ಜಗನ್ಮಾತೆಯಾಗಿ ಕಂಡರು. ಮಡದಿಯ ಮೋಹನ ರೂಪಿನಲ್ಲಿ ಅಪೂರ್ವವಾದ ತೇಜಸ್ಸನ್ನು ಕಂಡರು. ಹೂಗಳನ್ನು ಎರಚಿದರು. ಶ್ರದ್ಧಾ ಭಕ್ತಿಗಳಿಂದ ಪೂಜಿಸಿದರು. ಹೀಗೆ ಸ್ವಾಮೀಜಿಯವರು ಸ್ತ್ರೀ ಸಮೂಹಕ್ಕೆ ಅಸಮಾನ್ಯವಾದ ಗೌರವ ಪುರಸ್ಕಾರಗಳನ್ನು ನೀಡಿ, ಅವರ ಸ್ಥಾನಮಾನವನ್ನು ಸಮಾಜದಲ್ಲಿ ಕಾಪಿಟ್ಟರು–

"ಹೆಣ್ಣು ಮಾಯೆಯಲ್ಲ; ಆಕೆ ಜ್ಞಾನದ ಕಣ್ಣು"

ಪರಮಹಂಸರಿಗೆ ಒಮ್ಮೊಮ್ಮೆ ತಾನು ಸಾಧಕನೋ ಅಲ್ಲವೋ ಎಂದ ಸಂದೇಹ ಉಂಟಾಗುತ್ತಿತ್ತು. ಈ ದೌರ್ಬಲ್ಯವು ಅವರ ಸಾಧನಸಿದ್ಧಿಗೆ ಅಡಚಣೆಯುಂಟು ಮಾಡುತ್ತಿತ್ತಲ್ಲದೆ ಅವರ ಮನಸ್ಸನ್ನು ಬಿರುಗಾಳಿಗೆ ಸಿಕ್ಕ ದೋಣಿಯ ದುಃಸ್ಥಿತಿಗೆ ತರುತಿತ್ತು. ಇಂತಹ ಸಮಯದಲ್ಲಿ ಅವರ ಸಂದೇಹ ದೂಡಿ, ಅವರ ಸಾಧನಸಿದ್ಧಿಗೆ ಸೋಪಾನವಾಗಿ, ಅವರು ಸುಲಲಿತವಾಗಿ ಗುರಿಮುಟ್ಟಲು ನೆರವಾದವರು ಓರ್ವ ಗುರು ಮಾತ್ರವೆ. ಆ ಗುರು ಗಂಡಲ್ಲ–ಓರ್ವ ಹೆಣ್ಣು. ಆಕೆಯೇ ಭೈರವೀ ಬ್ರಾಹ್ಮಣಿ. ಈಕೆ ಪರಮಹಂಸರಿಗೆ ಮಾರ್ಗದರ್ಶಿ ಮಾತ್ರವಲ್ಲ, ಮೊದಲ ಗುರುವೂ ಆಗಿದ್ದಳು.

ಭೈರವೀ ಬ್ರಾಹ್ಮಣಿ ವಂಗದೇಶದ ಕುಲೀನ ಮಹಿಳೆ. ವೈದೀಕ ಮನೆತನದವಳು. ವೈಷ್ಣವ ಸಂಪ್ರದಾಯದ ಮಹಾನ್ ವಿದ್ಯಾರ್ಥಿ, ಭಕ್ತಿ ಶಾಸ್ತ್ರದಲ್ಲಿ ಹಿಮಾಲಯ. ಸಹಜ ಸೌಂದರ್ಯದ ಖನಿ, ಜ್ಞಾನ ಸೌಂದರ್ಯದಸಾಗರ. ಇಂತಹ ನಾರೀಮಣಿಯ ಒಳಗಣ್ಣಿಗೆ ಸ್ವಾಮೀಜಿಯವರ ವ್ಯಕ್ತಿತ್ವ ಗೋಚರವಾಗಿ, ಸೀಮಾಪುರುಷನ ದರ್ಶನಕ್ಕೆಂದು ಓಡೋಡಿ ಬಂದಳು. ಗುರುದೇವ ಆಕೆಯ ತೇಜಸ್ಸನ್ನು ಕಂಡು 'ಬಾ... ತಾಯಿ...ಬಾ' ಎಂದು ಆನಂದಗಂಬನಿ ತುಂಬಿ ಸ್ವಾಗತಿಸಿದರು. ಆಕೆಯ ಜ್ಞಾನದ ಪ್ರಕಾಶವನ್ನು ಕಂಡು ಸಂಪೂರ್ಣವಾಗಿ ಒಳಗಣ್ಣು ತೆರೆದರು. ಆಕೆಯ ಉಪದೇಶವನ್ನು ಕಿವಿಗೊಟ್ಟು ಕೇಳಿದರು. ಭೈರವೀ ಬ್ರಾಹ್ಮಣಿಯು, ಜನತೆ ಹುಚ್ಚನೆಂದು ಕರೆಯುವ ಸ್ವಾಮೀಜಿಯ ಆಧ್ಯಾತ್ಮ ಸ್ಥಿತಿ

"ಕವಿತಾಕೃಷ್ಣ"

ಯನ್ನು ಕಂಡು "ಬಾ ಬಾ... ಮಹಾಭಾವ ನಿನಗೆ ಶರಣಾಗತವಾಗಿದೆ. ಈ ನಿಟ್ಟಿನಲ್ಲೇ ಮುನ್ನಡೆ" ಎಂದು ಹೇಳಿ ಸಂದೇಹ ಸುಟ್ಟಳು. ಸ್ವಾಮೀಜಿ ಆ ಸ್ತ್ರೀಯನ್ನು ಪ್ರಥಮ ಗುರುವಾಗಿ ಸ್ವೀಕರಿಸಿದರು.

"ಸ್ತ್ರೀಯೆ ನಿಜವಾದ ವೈದ್ಯಳು"

ಪರಮಹಂಸರಿಗೆ ಅನಾರೋಗ್ಯವಾಯಿತು ಮೈ ಕೆಂಡದಂತೆ ಸುಡಲಾರಂಭಿಸಿತು. ಬೇಗೆಯಿಂದ ಕಂದಿ ಕುಂದಿ ಹೋದರು. ಆಗ ಬೈರವೀ ಬ್ರಾಹ್ಮಣಿ ಮಾತೃವಾತ್ಸಲ್ಯದಿಂದ ಸ್ವಾಮೀಜಿಯವರ ಸೇವೆ ಸಿದ್ಧವಾದಳು. ಗಂಗಾಸ್ನಾನಮಾಡಿಸಿ, ಶ್ರೀಗಂಧಲೇಪನ ಮಾಡಿ ಹೂವಮಾಲೆಹಾಕಿದಳು. ಅನೇಕ ವೈದ್ಯರಿಂದ ವಾಸಿಯಾಗದ ರೋಗಕೂಡಲೆ ನಿರ್ನಾಮವಾಯಿತು. ಸ್ವಾಮೀಜಿಗೆ ಆನಂದವಾಯಿತು. ತನು–ಮನಗಳ ರೋಗದೂಡಿದ ಆ ಸ್ತ್ರೀಗೆ ಶರಣುಮಾಡಿದರು – ಜಗತ್ತಿಗೆ ತನು–ಮನಗಳೆರಡರ ರೋಗ ದೂಡಲು ಸ್ತ್ರೀಯಿಂದ ಸಾಧ್ಯ. "ಸ್ತ್ರೀಯೇ ನಿಜವಾದ ವೈದ್ಯಳು" ಎಂದು ಸಾರಿದರು.



(14 ನೇ ಪುಟದಿಂದ)

ಕಲ್ಪನೆಯಲ್ಲಿ ಚಿತ್ರೋಪಮಭಾಷೆ ಇದೆ. ಕೃಷ್ಣನ ಸುಂದರತರ ಮೂರ್ತಿ ಕಡೆದು ನಿಲ್ಲಿಸಲಾಗಿದೆ.

ಕಮನೀಯ ಕೃಷ್ಣನ ರಮಣೀಯ ಲೀಲಾ ವಿನೋದಗಳನ್ನು ಕವಿವರ್ಯ ಲೀಲಾಶುಕ ಬಗೆಬಗೆಯಲ್ಲಿ ವರ್ಣಿಸುತ್ತಾನೆ. ಲೀಲಾಶುಕ ತನ್ನ ಅಜರಾಮರ ಸರಸಸುಂದರ ಗ್ರಂಥ – ಶ್ರೀಕೃಷ್ಣ ಕರ್ಣಾಮೃತವನ್ನು ರಚಿಸಿ ಅದನ್ನು ಪ್ರೀತಿಯಿಂದ ಒಪ್ಪಿಸಿಕೊಳ್ಳುವ ಕೃಪೆದೋರಬೇಕೆಂದು ವ್ರಜ ಸುಂದರಾಂಗನಾದ ಮುಕುಂದನನ್ನು ಬೇಡಿಕೊಂಡಿದ್ದಾನೆ. ಸತ್ಕವಿಯ ಸಾತ್ತ್ವಿಕ ಭಕ್ತಿ – ಭಗವದರ್ಪಿತವಾಗದೇ ಇರಲು ಸಾಧ್ಯವೇ ?

ವಿದುರನರ್ಪಿಸಿದ ಒಕ್ಕುಡಿತೆ ಹಾಲಲ್ಲಿ, ಕುಂತಿ ದೇವಿ ಅರ್ಪಿಸಿದ ನಿರ್ಮಲ ಪ್ರಾರ್ಥನಾಸುಮಾಂಜಲಿ ಕುಚೇಲನರ್ಪಿಸಿದ ಹಿಡಿ ಅವಲಕ್ಕಿಯಲ್ಲಿ, ಯಶೋದೆ ಅರ್ಪಿಸಿದ ಸ್ತನ್ಯದಲ್ಲಿ, ಶಬರಿ ಸಮರ್ಪಿಸಿದ ಎಂಜಲು ಹಣ್ಣಿನಲ್ಲಿ, ಮುನಿಪತ್ನಿಯರರ್ಪಿಸಿದ ಸುಭಕ್ಷನೈವೇದ್ಯದಲ್ಲಿ ಯಾವ ಪ್ರೀತಿಯನ್ನು ತೋರಿಸಿ ಸ್ವೀಕರಿಸಿದ, ಅದೇ ಪ್ರೀತಿಯನ್ನು ನನ್ನ ಬಗ್ಗೆ ನನ್ನ ಕಾವ್ಯದ ಬಗ್ಗೆ ತೋರಿ ಸ್ವೀಕರಿಸು– ಎನ್ನುತ್ತದೆ ಕವಿವಾಣಿ.

ಮದಶಿಖುಂಡಿ ಶಿಖಂಡ ವಿಭೂಷಣಂ
ಮದನ ಮಂಥರ ಮುಗ್ಧ ಮುಖಾಂಬುಜಂ
ವ್ರಜವಧೂ ನಯನಾಂಚಲ ವಂಚಿತಂ
ವಿಜಯತಾಂ ಮಮ ವಾಙ್ಮಯಜೀವಿತಂ ॥

ನವಿಲುಗರಿ ಧರಿಸಿ ಶ್ರೀಶ ಪ್ರಕಾಶಿ ಮುಖಾಂಬುಜದ, ವ್ರಜನಾರೀ ಜನಾಪಾಂಗದಿಂದ ಮೋಸಗೊಳಿಸಲ್ಪಟ್ಟ ಕೃಷ್ಣ ನನ್ನ ಕಾವ್ಯದ ಜೀವಾಳವಾಗಿ ವಿಜೃಂಭಿಸಲಿ–ಎಂದು ಕೋರಿಕೊಳ್ಳುವ ಲೀಲಾಶುಕ,ಪ್ರಹ್ಲಾದಭಾಗಧೇಯನೂ ನಿಗಮಾಂತ ಮಹಾಗುಹಾಂತರಾಧೇಯನೂ, ವಿಬುಧವಿಧೇಯನೂ ಆದ ಬಾಲಗೋಪಾಲನನ್ನು ನಮಿಸಿ, ಸ್ಮರಿಸಿ, ವರ್ಣಿಸಿ, ಚಿಂತಿಸಿ, ಧ್ಯಾನಿಸಿ, ಧನ್ಯನಾಗಿದ್ದಾನೆ ರಸಾವೇಶದಿಂದ ಬರೆಯುವಾಗ ಒಂದುಕಡೆ ಕೃಷ್ಣನನ್ನು ಕವಿ ಲಾಲಿತ್ಯರತ್ನಾಕರನೆನ್ನುತ್ತಾನೆ. ಒಂದುಕಡೆ ರಾಧಾರಾಧಿತ ವಿಭ್ರಮಾದ್ಭುತ ರಸ ಎನ್ನುತ್ತಾನೆ. ಒಂದುಕಡೆ ಸನ್ಮನೋಬಿಂಬಲೀಲ ಎನ್ನುತ್ತಾನೆ. ಒಂದು ಕಡೆ ವಸುದೇವ ಭಾಗ್ಯ ಎನ್ನುತ್ತಾನೆ.

ಭಾಗವತಪ್ರಿಯನೂ ಭಕ್ತಜಲಕಲ್ಪತರುವೂ ಆದ ಲೀಲಾಮಾನುಷವಿಗ್ರಹ ಕೃಷ್ಣನ ಕಥೆಯೇ ಸುಂದರ – ಬಂಧುರ – ಮಧುರಾತಿಮಧುರ ಮೃಚ್ಛಕ್ಷಣ – ಗೋವರ್ಧನೋದ್ಧರಣ – ಯಮಳಾರ್ಜುನನ ಭಂಜನನ – ವೇಣುವಾದನ – ರಾಸನರ್ತನ–ಎಲ್ಲವೂ ವಿಚಿತ್ರವೇ. ಚಿತ್ರವಿಚಿತ್ರವಾದ ಚರಾಚರಜಗತ್ ಪ್ರಭುವಿನ ಕಾರ್ಯ ವಿಧಾನವೇ ವಿಚಿತ್ರ. ಆದ್ದರಿಂದಲೇ ಪುರಂದರ ದಾಸರು–ಚಿತ್ರಚರಿತನಾದ ಹರಿ–ಎಂದರು.

ಆ ವಿಚಿತ್ರಕೆ ನಮಿಸಿ ಧನ್ಯರಾಗೋಣ

---

ನೇ ಪುಟದಿಂದ)

ಗಲು ಅನುಮತಿ ಕೊಡುತ್ತಾನೆ. ಐರಾವತ ಸಡಗರದಿಂದ ಅಲಂಕಾರ ಮಾಡುತ್ತಾರೆ. ಶಿ—ಮುಂತಾದವರು ಅಲಂಕಾರ ಮಾಡಿ ಸುತ್ತಾರೆ. ಕಾಮಧೇನು, ಕಲ್ಪವೃಕ್ಷ— ತಾದುವೂ ಸಿದ್ಧವಾಗುತ್ತವೆ. ತುಂಬುರರೂ, ದರೂ ಅಣಿಯಾಗುತ್ತಾರೆ. ಅನೇಲೆ ಐರಾ ಕೊಡನೆ ದೇವಲೋಕದ ವಸ್ತುಗಳೆಲ್ಲ ಕಂಸೇತು ಮೂಲಕ ಭೂಮಿಗೆ ಇಳಿದು ಬರುತ್ತವೆ.

ಇಂದ್ರಪ್ರಸ್ಥನಗರದ ಹೊರವಲಯದಲ್ಲಿ ದೇವ ಕದಲ್ಲಿ ದೇವಲೋಕದ ವಸ್ತುಗಳಿಗಾಗಿ ಬೇರೆ ಬಿಡಾರಗಳನ್ನು ರಚಿಸಿರುತ್ತಾರೆ ಕೃಷ್ಣನ ತೃತ್ವದಲ್ಲಿ ಭೀಷ್ಮ ದ್ರೋಣಾದಿಗಳು ಐರಾವತ ನ್ನು, ಅದರೊಡನೆ ಬಂದ ದೇವಲೋಕದ ಎಲ್ಲ ನ್ನು ಮಂಗಳವಾದ್ಯಗಳ ಸಮೇತ ಎದುರು ಂದು, ಕರೆದೊಯ್ದು, ಅವರವರ ಬೀಡಿಗೆ ತ್ತಾರೆ. ಅಷ್ಟರಲ್ಲಿ ಸಂಜೆಯಾಗುತ್ತದೆ. ರೂ ತಮ್ಮ ನಿವಾಸಗಳಿಗೆ ಹಿಂತಿರುಗುತ್ತಾರೆ. ಬೆಳಗಾಗುತ್ತಲೇ ಭೀಷ್ಮರು, ಕುಂತಿಯನ್ನು ನು ಗಾಂಧಾರಿಯನ್ನು ಆಹ್ವಾನಿಸುವಂತೆ ಹುತ್ತಾರೆ. ಬೇಗನೆ ಸ್ನಾನಾದಿಗಳನ್ನು ಮುಗಿಸಿ, ತಿ, ಗಾಂಧಾರಿಯ ಅಂತಃಪುರಕ್ಕೆ ಬರುತ್ತಾಳೆ. ನು ಮಾಡಲಿರುವ ಗಜನೋಂಪಿಯ ವಿಷಯ ನ್ನು ತಿಳಿಸಿ—

ಭಾನುಮತಿ ಮೊದಲಾದ ಸೊಸೆಯರು
ಸೂನುದುಶ್ಶಳೆ ಸಹಿತಲಾ ವರ
ಮಾನಿನಿಯರೆಲ್ಲರನು ನೀವೊಡಗೊಂಡು
ಲೀಲೆಯಲಿ ॥
ಸಾನುರಾಗದಿ ಬಂದು ನೋಂಪಿಯ
ನ್ಯೂನವಿಲ್ಲದೆ ನೋಡಬೇಹುದು
ಮಾನನಿಧಿ ನೀವ್‌ಕರಳಿ ಬೇಗದೊಳೆಂದಳಾ
ಕುಂತಿ ॥

ತಿಯ ಆಹ್ವಾನವನ್ನು ಕೇಳಿ ಗಾಂಧಾರಿ ಸಿಗೊಳ್ಳುತ್ತಾಳೆ. "ಮೇಳವಿಸಿ ನಾ ಮಾಡಿದ ರಾವತದ ನೋಂಪಿಯಲಿ, ಬಾಲೆಯನು ತಾ ಸದಾದೆನು, ಖೂಳತನವಾಯ್ತೆನುತ್ತ" ಪರಿತಪಿ ತ್ತಾಳೆ. ಅನಂತರ "ಬಾರೆನು, ತಂಗಿ ನೀ ಗು" ಎಂದು ಹೇಳುತ್ತಾಳೆ. ಕುಂತಿ, ಸುಮ್ಮ ಗದೆ, ವಿನಯಪೂರ್ವಕವಾಗಿ ಮತ್ತೆ ಮತ್ತೆ ರ್ಥಿಸುತ್ತಾಳೆ. ಅವಳ ಮಾತನ್ನು ಕೇಳುತ್ತ ಳುತ್ತ ಗಾಂಧಾರಿಗೆ ಕೋಪ ಉಕ್ಕೇರುತ್ತದೆ. ಮರುಳೆ, ನಿನ್ನಯ ಸುತರ ಹಂಗಿನ ಸುರಗಜವ ನೋಡೆ, ಸಾಕಂತಿರಲಿ ನೀ ಹೋಗು"ಎಂದು ಕ್ಷಣದಿಂದ ಹೇಳುತ್ತಾಳೆ. ಕುಂತಿ ಸುಮ್ಮನಾಗ ಲ್ಲ—"ಮಕ್ಕಳಾಟಿಕೆ ಬೇಡ, ಐರಾವತವ ನೀನು ; ಐವರು ಮಕ್ಕಳಲ್ಲವೆ ನಿನಗೆ"ಎನ್ನುತ್ತಾಳೆ. ಮಾತಿಗೆ ಗಾಂಧಾರಿ — "ಬಾಲೆ ತನ್ನಯ ಂಪಿಗಂದಾನಾಲಿಸದೆ ಮರೆದುದಕೆ, ನೀನೊಲಿ ದಾಲಯಕೆ ಕರೆವುದನು ಕಂಡೆನು; ಬಾರೆ, ಹೋಗು" ಎಂದು ಹೇಳುತ್ತಾಳೆ. ಅದರೂ ಕುಂತಿ ಬಿಡುವುದಿಲ್ಲ—

ಧರಣಿಯೊಡೆತನವೊಂದೆ ಬಹಳೆ
ಶ್ವರಿಯ ಸಂಪದ ಪಾಂಡು ಧೃತರಾ
ಷ್ಟ್ರರಿಗೊಂದೆ ಸುತರು ಸುತರಲಿ ಭಿನ್ನ
ಭಾವನೆಯೆ ॥
ನರನ ವಿಜಯವನೋಡಿ ನೀವತಿ
ಪರಿಣಮಿಸಿ ಗಾಂಧಾರಿ ಜರೆವುದು
ಹಿರಿಯರಿಗೆ ಗುಣವಲ್ಲ ಜರಬೇಕೆಂದಳಾ ಕುಂತಿ ॥

ಇಷ್ಟು ಹೊತ್ತು ಅದುಮಿ ಇಟ್ಟಿದ್ದ ಗಾಂಧಾರಿಯ ಕೋಪ, ರೋಷವಾಗಿ ಪರಿಣಮಿಸಿ ಸಿಡಿಲೆದ್ದು ಹೊರ ಚಿಮ್ಮುತ್ತದೆ.

ಮಡದಿ ಬಹುಪತಿಗಳಲಿ ಜಾಣೆನ
ನಡೆಯ ಕಲಿತಿಹೆಯಾಗಿ ಉತ್ತರ
ಗೊಡುವೆ ಹಿರಿಯರು ಹಿರಿಯರೆಂದೇ ಜರೆವೆ
ಕೊಬ್ಬಿನಲಿ ॥
ನುಡಿಯಲಾಗದು ದಿಟ್ಟೆ ಹೆಂಗುಸೆ
ಕಡು ಚವಳೆ ಹೋಗೆಂದು ಸಲೆಕಡೆ
ನುಡಿದು ಜರಿದಳು ನಿನ್ನ ನೋಂಪಿಯ
ಗೊಡವೆ ಬೇಡೆಂದು ॥

ಕುಂತಿ ದುರ್ಬಲ ಹೆಣ್ಣಲ್ಲ. ಗಾಂಧಾರಿಯಷ್ಟೇ ಧೀಶಕ್ತಿಯನ್ನು ಪಡೆದವಳು. ಗಾಂಧಾರಿಯ ಚುಚ್ಚು ಮಾತಿನಿಂದ ಇವಳ ರೋಷವೂ ತಲೆ ಎತ್ತುತ್ತದೆ. ಆಗ—

ಬಂದು ನೋಡುವುದುಚಿತ ಬಾರದ
ಡಿಂದುಮುಖಿಯೇಗುವಿರಿ ಹಣೆಯಲಿ
ಚಂದ್ರಶೇಖರ ಬರೆದ ಲಿಪಿಯನು ತೊಡೆಯ
ಲಾರಳವು ।
ಇಂದ್ರನೈರಾವತವ ನೋಡದ
ಮಂದಭಾಗ್ಯಳೆ ಹೋಗೆನುತ ಪೂ
ರ್ಣೇಂದುಮುಖಿ ತಿರುಗಿದಳು ಬಂದಳು
ರಾಜಬೀದಿಯಲಿ ॥

ಹಸ್ತಿನಾವತಿಯಿಂದ ಹೊರಟ ಕುಂತಿ, ನೇರ ವಾಗಿ ಇಂದ್ರಪ್ರಸ್ಥಕ್ಕೆ ಬಂದು, ಭೀಷ್ಮರಿಗೆ ನಡೆದು ದನ್ನು ತಿಳಿಸುತ್ತಾಳೆ. ಅವರಿಗೆ ಗಾಂಧಾರಿಯ ವರ್ತನೆಯನ್ನು ಕೇಳಿ ಖೇದವುಂಟಾಗುತ್ತದೆ. ಅವರು ಕುಂತಿಯನ್ನು ಸಮಾಧಾನಗೊಳಿಸುತ್ತಾ—

ತರುಣಿಯಂಜಿಕೆಯೇಕೆ ಹೋಗೌ
ಸುರಗಜವ ನೀ ನೋಡು ದಾನಕೆ
ಹಿರಿಯ ಭಂಡಾರವನು ತೆಗೆಸುವೆ ತಣಿಸು
ಭೂಸುರರ ।
ಧರಣಿಪತಿ ನಿನ್ನರಸನಾತನ
ಹಿರಿಯಮಗ ಯುಧಿಷ್ಠಿರನು ಇರೆ
ಗರುವರಿನ್ನಾರೆಂದು ಗರ್ಜಿಸಿ ನುಡಿದನಾ
ಭೀಷ್ಮ ॥

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನ ಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸು ವವರು ಕೆಳಗಣ ಸೂಚನೆಗಳನ್ನು ಗಮ ನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಹಿಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯ ಗಳ ಬರಹಗಳು ತತ್ಸಂಬಂಧಿ ಫೋಟೋ ಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿ ನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟ ವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

# ನುತಿಪೆ ನಿನ್ನ ಶ್ರೀ ಮಹಾಭಗವತಿ

**ರಾಗ – ನಾಯಕಿ** **ತಾಳ – ಆದಿ**

ನುತಿಪೆ ನಿನ್ನ ಶ್ರೀ – ಮಹಾಭಗವತಿ
ನಾರಾಯಣನಾ – ಮಹಾನಾಯಕಿ ॥ ಪ ॥

ಲೋಕೈಕೇಶ್ವರಿ ಲೋಕ ಸಂರಕ್ಷಕಿ
ದಾಸನ ಮೇಲೆ ಸದಾ ನಿನ್ನದಯೆ ॥ ಅ.ಪ. ॥

ಪುರುಷೋತ್ತಮನೇ ನಿನಗೆ ಕಾಂತನು
ಆದಿಶೇಷನೇ ಶಯ್ಯಾಸನವು
ವೇದಾತ್ಮನಾದ ಗರುಡನೆ ವಾಹನ
ಜಗನ್ಮೋಹಿನಿ ಮಾಯೆಯೇ ತೆರೆ ॥ ೧ ॥

ಎಲ್ಲೆ ಮೀರಿರುವ ನಿನ್ನ ಮಹಿಮೆಯನು
ನಿನ್ನಯನೇ ಅಳಿಯಲಾರನು
ಶಿವ ಬ್ರಹ್ಮ ಸುರರೆ ಹೆಂಡತಿಯರೊಡನೆ
ದಾಸದಾಸಿಗಣ ಶರಣಾಗತರು ॥ ೨ ॥

ನಿನ್ನ ಕುಡಿನೋಟ ಕೃಪೆಯಿಂದೀಗ
ಮೂಲೋಕದಿ ಧನ ಅಮೃತ ಚೆಲ್ಲಿದೆ
ನಿನ್ನ ಪರಮಾನುಗ್ರಹವಿಲ್ಲದೆಯೆ
ಸಾರಕೈವಲ್ಯದಿ ಶ್ರೇಯಸ್ಸೆ ಇಲ್ಲಾ ॥ ೩ ॥

ಶಾಂತಾನಂತ ಮಹಾವಿಭೂತಿಯ
ಪರಬ್ರಹ್ಮ ಹರಿಯ ಅದ್ಭುತರೂಪವು
ಎಲ್ಲವತಾರವು ಅನುಗುಣವಾಗಿ
ನಿನ್ನ ರೂಪೆಂದು ವೇದ ಸಾರುತಿದೆ ॥ ೪ ॥

(ಶ್ರೀ ಯಾಮುನಾಚಾರ್ಯರ ಚತುಃಶ್ಲೋಕಿ ಅನುವಾದ)

**ಶ್ರೀ ಬಿ.ಎಸ್. ರಾಮಾಚಾರ್**

ಐರಾವತದ ಪೂಜೆಗೆ ಎಲ್ಲ ಸಿದ್ಧತೆಗಳೂ ನಡೆಯುತ್ತಿವೆ. ಎಲ್ಲರೂ ಪೂಜೆಯನ್ನು ನೋಡಲು ಸಂಭ್ರಮದಿಂದ ಸಿದ್ಧರಾಗುತ್ತಿದ್ದಾರೆ. ಆಗ ಭೀಷ್ಮರಿಗೆ–"ವಿಧವೆಯಾಗಿರುವ ಕುಂತಿ ಗಜವ್ರತವನ್ನು ಮಾಡಬಹುದೇ ?" ಎಂಬ ಸಂಶಯ ಬರುತ್ತದೆ. ತಕ್ಷಣವೇ ಅವರು ಋಷಿಗಳಿದ್ದ ಬಿಡಾರಕ್ಕೆ ಬಂದು, ತಮ್ಮ ಸಂಶಯವನ್ನು ತಿಳಿಸುತ್ತಾರೆ. ಆಗ ನಾರದರು–

ಪತಿಯ ಮುನಿಮಂತ್ರದಲಿ ತನ್ನಯ
ಸತಿಗೆ ಪುತ್ರರ ಪಡೆವುದೆನೆ ಬಹು
ಪತಿಗಳಲಿ ಸುತರಾದರೀಕೆಗೆ ಇಲ್ಲ ವೈಧವ್ಯ ।
ಅತಿರಥನು ಮಾಡಿದ ಪ್ರತಿಜ್ಞೆಯು
ಗತವಹುದೆ ಎಲೆ ಭೀಷ್ಮ ಕುಂತಿಯು
ವ್ರತವ ಮಾಡಲಿ ಬರಲಿ ಎಂದನು
ನಾರದನು ನಗುತ ।

ನಾರದರ ಮಾತನ್ನು, ಕೃಷ್ಣನೂ, ಭೃಗು ಮುನಿಯೂ, ಇತರ ಋಷಿಗಳೂ ಅನುಮೋದಿಸುತ್ತಾರೆ. ಭೀಷ್ಮರಿಗೆ ಸಂಶಯ ಪರಿಹಾರವಾಗುತ್ತದೆ.

ಕುಂತಿ ಮತ್ತು ಪಾಂಡವರು ಸಾಲಂಕೃತರಾಗಿ ಸಂಭ್ರಮದಿಂದ ನಗರದ ಹೊರವಳಯದ ಬಿಡಾರಗಳಲ್ಲಿದ್ದ ಐರಾವತ–ಮೊದಲಾದ ದೇವಲೋಕದ ವಸ್ತುಗಳನ್ನು ಪೂಜಿಸಲು ಹೊರಡುತ್ತಾರೆ. ಇತರರು ಪೂಜೆಯನ್ನು ನೋಡಲು ಹೊರಡುತ್ತಾರೆ. ಕೃಷ್ಣ ಮುಂಭಾಗದಲ್ಲಿರುತ್ತಾನೆ. ಅವನ ಹಿಂದೆ ಭೀಷ್ಮ, ದ್ರೋಣ, ವಿದುರರು; ಅವರ ಹಿಂದೆ ಕುಂತಿ ಮತ್ತು ಪಾಂಡವರು. ಅವರ ಹಿಂದೆ ಮುತ್ತೈದೆಯರು; ಅವರ ಹಿಂದೆ ಇತರರು.

ಕುಂತಿ ಆಗಮೋಕ್ತರೀತಿಯಲ್ಲಿ ಕ್ರಮವಾಗಿ ಐರಾವತ, ಕಾಮಧೇನು, ಕಲ್ಪವೃಕ್ಷ, ತುಂಬುರರು ನಾರದ, ಇಂದ್ರನರಸಿಯು ಸಹಿತ ದೇವಲಲನೆಯರು – ಮುಂತಾದವರನ್ನೆಲ್ಲ, ಕಾಣಿಕೆಯಿತ್ತು ಪೂಜಿಸುತ್ತಾಳೆ. ಅನಂತರ ಧರ್ಮರಾಯ, ಭೀಮ, ಅರ್ಜುನ, ನಕುಲ ಮತ್ತು ಸಹದೇವ–ಇವರು ಪೂಜಿಸುತ್ತಾರೆ. ಆಮೇಲೆ ಕುಂತಿ ಗಂಗೆಯ ತಡಿಗೆ ಬಂದು, ಮಳಲ ಗೌರಿಯನ್ನು ಮಾಡಿ ಷೋಡಶೋಪಚಾರ ರೀತಿಯಲ್ಲಿ ಪೂಜಿಸುತ್ತಾಳೆ. ಅಲ್ಲಿಂದ ಐರಾವತದ ಹತ್ತಿರ ಬಂದು, ಮತ್ತೆ ಷೋಡಶೋಪಚಾರ ಕ್ರಮದಲ್ಲಿ ಪೂಜಿಸಿ, ದಿಗುಪಾಲರಿಗೆ, ಹರಿಹರ ಬ್ರಹ್ಮಾದಿಗಳಿಗೆ ನಮಿಸಿ, ಅಲ್ಲಿಯೇ ಸಿದ್ಧವಾಗಿದ್ದ ತೊಟ್ಟಿಲಿನಲ್ಲಿ ಕುಳಿತುಕೊಳ್ಳುತ್ತಾಳೆ. ಪರಿಚಾರಕರು ಆ ತೊಟ್ಟಿಲನ್ನು ಗಜದ ಮೇಲಕ್ಕೆ ತೆಗೆದು ಸರಿಸುತ್ತಾರೆ. ಐರಾವತದ ಬೆನ್ನಿನ ಮೇಲೆ, ಸಾಲಂಕೃತವಾದ, ಇಂದ್ರನು ಕುಳಿತುಕೊಳ್ಳುವ ಗದ್ದುಗೆ ಇರುತ್ತದೆ. ತೊಟ್ಟಿಲಿನ ಸಹಾಯದಿಂದ ಮೇಲೇರಿದ ಕುಂತಿ ಆ ಗದ್ದುಗೆಯ ಮೇಲೆ ಕುಳಿತುಕೊಳ್ಳುತ್ತಾಳೆ. ಅವಳಿಗೆ ದೇವಲೋಕದವರು

...ಮರ ಬೀಸುತ್ತಾರೆ; ಸುರಪನ ಛತ್ರ ಹಿಡಿಯುತ್ತಾರೆ.

ನಗರದ ಹೊರವಲಯದಿಂದ ಹೊರಟ ಸುರಗಜ ...ಂದ್ರಪ್ರಸ್ಥದ ಪಥ, ಬಂದು ನಿಲ್ಲುತ್ತದೆ. ಗಜ...ಂದ ಇಳಿದ ಕುಂತಿ, ಸಕಲ ಭೂಮಿಪರನ್ನೂ, ...ವರ ಅರಸಿಯರನ್ನೂ, ವೈಶ್ಯರನ್ನೂ, ಶೂದ್ರ...ನ್ನೂ, ಪ್ರತ್ಯೇಕವಾಗಿ ಕುಶಲಪ್ರಶ್ನೆಗಳನ್ನು ಕೇಳಿ ...ಂತೋಷಪಡಿಸುತ್ತಾಳೆ. ಆ ಮೇಲೆ ಅವರಿಗೆ ...ಉಡುಗೊರೆಗಳನ್ನಿತ್ತು ಗೌರವಿಸುತ್ತಾಳೆ. ಅನಂತರ ...ಕಲ ದಾನಗಳಿಂದ ಭೂಸುರರನ್ನು ತೃಪ್ತಿಗೊಳಿ...ಸುತ್ತಾಳೆ. ದೇಶವಿದೇಶದ ಮುತ್ತೈದೆಯರನ್ನು ...ವಾಭರಣ, ದಿವ್ಯಾಂಬರ, ಸುಲೇಪಗಳಿಂದ ...ತ್ಕರಿಸಿ, ಬಾಗಿನವೀಯುತ್ತಾಳೆ. ಮತ್ತೆ, ...ಂಗುರ ಹೊಡೆಸಿ ನಗರದ ಸ್ತ್ರೀಪುರುಷರನ್ನು ...ಬಾಲವೃದ್ಧರನ್ನೂ ಕರೆಸಿ, ಮನದಣಿಯೆ ದಾನ...ಗಳನ್ನು ಕೊಡುತ್ತಾಳೆ. ಇದಾದ ನಂತರ ಮತ್ತೆ ...ಸುರಗಜವನ್ನು ಪೂಜಿಸಿ, ಮೇಲೇರಿ ಕುಳಿತು...ಕೊಳ್ಳುತ್ತಾಳೆ. ಐರಾವತ ಮುಂದೆ ನಡೆಯುತ್ತದೆ.

ಇಂದ್ರಪ್ರಸ್ಥನಗರವನ್ನೆಲ್ಲ ಸುತ್ತಾಡಿದ ಐರಾವತವನ್ನು, ದೇವಲೋಕದ ಸಮಸ್ತ ವಸ್ತುಗಳೊಂದಿಗೆ ನಡೆಸಿಕೊಂಡು, ಹಸ್ತಿನಾವತಿಗೆ ಬರುತ್ತಾರೆ. ಈ ಉತ್ಸವದಲ್ಲಿ ಎಲ್ಲರಿಗಿಂತ ಮೊದಲು ಕೃಷ್ಣ, ಅವನ ಹಿಂದೆ ಕುಂತಿ ಕುಳಿತ ಐರಾವತ ಮತ್ತು ದೇವಲೋಕದ ವಸ್ತುಗಳು ಬರುತ್ತಿರುತ್ತವೆ. ಕೃಷ್ಣನ ಅಕ್ಕ ಪಕ್ಕದಲ್ಲಿ ಪಾಂಡವರು, ಭೀಷ್ಮ ದ್ರೋಣ—ಮುಂತಾದವರು ನಡೆದು ಬರುತ್ತಿರುತ್ತಾರೆ. ಮಾರ್ಗ ಮಧ್ಯದ ನಗರಗಳಲ್ಲಿ ಗೌರವಿಸಲ್ಪಟ್ಟ ಈ ಉತ್ಸವ ಹಸ್ತಿನಾವತಿ ಪಟ್ಟಣವನ್ನು ಪ್ರವೇಶಿಸುತ್ತದೆ. ಐರಾವತ ಸಕಲ ಉತ್ಸವದೊಂದಿಗೆ, ದುರ್ಯೋಧನನ ಅರಮನೆಯಿದ್ದ ಬೀದಿಯಲ್ಲಿ ನಡೆದು ಬರುತ್ತದೆ. ಈ ಸಂಭ್ರಮವನ್ನು ಕಂಡ ದುರ್ಯೋಧನ ನಾಚಿ ತಲೆ ತಗ್ಗಿಸುತ್ತಾನೆ. "ಎನ್ನ ಜನನಿಯ ಕರಿಯ ನೋಹಿಗೆ ಮುನ್ನ ಕುಂತಿಯು ಕರೆಯದಿದ್ದರೆ, ತನ್ನ ಘನತೆಯು ಮೆರೆದ ನರ್ಜುನನದಕೆ ತಪ್ಪೇನು?" ಎಂದು ಸಮಾಧಾನ ಮಾಡಿಕೊಳ್ಳುತ್ತಾನೆ. ಅಷ್ಟರಲ್ಲಿ ದೂರದಲ್ಲಿ ಕೃಷ್ಣ ಉತ್ಸವದೊಂದಿಗೆ ಬರುತ್ತಿರುವುದನ್ನು, ಅವನು ನೋಡುತ್ತಾನೆ. ಅರಮನೆಯಿಂದ ಇಳಿದು ಬಂದು, ನಮಸ್ಕಾರ ಮಾಡುತ್ತಾನೆ. ಅನಂತರ ಸುರಗಜಕ್ಕೆ ಕೈಮುಗಿಯುತ್ತಾನೆ. ಐರಾವತ—ಮುಂದುವರಿದು ಗಾಂಧಾರಿಯ ಅರಮನೆಯ ಮುಂದೆ ಸಾಗುತ್ತಿರುತ್ತದೆ. ಐರಾವತವೇರಿ ಬಂದ ಕುಂತಿಯನ್ನು ಕಂಡು ಗಾಂಧಾರಿ ನಾಚಿಕೆಯಿಂದ ತಲೆತಗ್ಗಿಸಿ, ಪರಿತಪಿಸುತ್ತಾಳೆ—

ನೂರು ಮಕ್ಕಳು ಜನಿಸಿ ತನ್ನುವ
ನೇರಿಸಿದರೀ ಮಣ್ಣುಗುದ್ದೆಯ
ವೀರರೈವರು ತನುಜರಿಂದ್ರನ ದಿವ್ಯ
ಮದಗಜವ ।
ಏರಿಸಿದರೀ ಕುಂತಿ ದೇವಿಗೆ
ಸೂರೆವೋಯಿತು ಸ್ವರ್ಗವಿಭವದಲಿ
ಮೀರಿ ಪುಣ್ಯವ ಪಡೆದಳೆಂದಳಲಿದಳು
ಗಾಂಧಾರಿ ॥

ಗಾಂಧಾರಿಯ ಪರಿತಾಪ ಧೃತರಾಷ್ಟ್ರನಿಗೆ ತಿಳಿಯುತ್ತದೆ. ಅವನು—

ಮರುಳೆ ನಿನ್ನಯ ನೋಹಿಗವರನು
ಕರೆದರೇನಾಯ್ತವರು ಬಂದೇ
ಕರೆದಡಲ್ಲಿಗೆ ಹೋಹರೇನಾಯ್ತೀಗ
ಮರುಗುವರೆ ।
ವರಮಹಾ ಪಾಂಡವರ ಘನತೆಯ
ಮೆರೆಯಬೇಕೆಂದೀ ಜನಾರ್ಧನ
ಚರಿಸುವುದಕಿನ್ನೇತಕಳಲುವೆಯೆಂದನಂಧ
ನೃಪ ॥

ಸುರಗಜ ಮುಂದುವರಿಯುತ್ತದೆ. ಹಸ್ತಿನಾವತಿಯ ಜನರೆಲ್ಲ, ಕೃಷ್ಣನನ್ನು, ಐರಾವತವನ್ನು, ಪೂಜಿಸುತ್ತಾರೆ. ನಾರಿಯರು ತಳಿಗೆಗಳಲ್ಲಿ ಆರತಿ ಎತ್ತುತ್ತಾರೆ. ಆನೆ ಹಸ್ತಿನಾಪುರದ ನಾನಾ ವಿಸ್ತರಗಳಲ್ಲಿ ಸಂಚರಿಸುತ್ತದೆ. ಸ್ತ್ರೀಪುರುಷ ಬಾಲರಾದಿಯಾಗಿ ಎಲ್ಲರೂ, ಸುತ್ತಬಳಸಿ, ಆನೆಯನ್ನು ನೋಡಿ ಸಂತೋಷಪಡುತ್ತಾರೆ. ಅನಂತರ ಐರಾವತ ಇಂದ್ರಪ್ರಸ್ಥಕ್ಕೆ ಬರುತ್ತದೆ.

ಹಸ್ತಿನಾವತಿಯಿಂದ ಹಿಂತಿರುಗಿ ಬಂದ ಲಕ್ಷ್ಮೀಸಹಿತ ಕೃಷ್ಣನನ್ನು ಇಂದ್ರಪ್ರಸ್ಥದ ವಾರಿಜಾನನೆಯರು ಉಪ್ಪಾರತಿಗಳನ್ನೆತ್ತಿ ಬರಮಾಡಿಕೊಳ್ಳುತ್ತಾರೆ. ಆಕಾಶದತ್ತಣಿಂದ ಶಂಕರನು ಕೃಷ್ಣನ ಮುಡಿಗೆ ಪುಷ್ಪಾಂಜಲಿಯನ್ನು ಸುರಿಯುತ್ತಾನೆ. ದೇವೇಂದ್ರನೂ ಮಲ್ಲಿಗೆಯಲರ ಮಳೆಯನ್ನು ಲಕ್ಷ್ಮೀವಲ್ಲಭನ ಪಾದಗಳಿಗೆ ಚೆಲ್ಲಿ, ಪಾಂಡವರ ಮುಡಿಗೆ ಸುರಿಸುತ್ತಾನೆ. ಕುಂತಿ ಐರಾವತದಿಂದ ಇಳಿದು, ಸಂತಸದಿಂದ ಕೃಷ್ಣನಿಗೆ, ಭೀಷ್ಮಾದಿಗಳಿಗೆ, ಅಂತರಿಕ್ಷದಿ ನೆರೆದ ದಿವಿಜ ಸಂತತಿಗೆ, ಭೂಸುರರ ಹಂತಿಗೆ ಕೈಮುಗಿದು, ತನ್ನ ರಾಜಮಂದಿರಕ್ಕೆ ಬರುತ್ತಾಳೆ. ಅನಂತರ ಭೋಜನದ ಉತ್ಸವ ನೆರವೇರುತ್ತದೆ. ಭೋಜನ ಸ್ಥಳದಲ್ಲಿ ಎಲ್ಲರೂ ಪಂಕ್ತಿ ಪಂಕ್ತಿಯಾಗಿ ಕುಳಿತುಕೊಳ್ಳುತ್ತಾರೆ. ಕೃಷ್ಣನಿಗೆ ರತ್ನದ ಹರಿವಾಣವನ್ನಿಟ್ಟು, ಅದರ ಸುತ್ತಲೂ ಕೆಲವು ಬಟ್ಟಲುಗಳನ್ನು ಅಳವಡಿಸುತ್ತಾರೆ. ಭೂಮೀಶ್ವರರಿಗೆ ತಳಿಗೆಮಟ್ಟಲುಗಳನ್ನೂ, ಭೂದಿವಿಜರಿಗೆ ಕನಕಪಾತ್ರೆಗಳನ್ನೂ ಇಡುತ್ತಾರೆ. ಮಿಕ್ಕ ಬಹುಜನ ಜಲಧಿಗೆ ಕದಳಿ ಪತ್ರವನ್ನು ಹಾಕುತ್ತಾರೆ. ಇಲ್ಲಿ ಸುರಸತಿಯರೇ ಬಂದು ಬಡಿಸುತ್ತಾರೆ. ಮೊದಲು ಕೃಷ್ಣನಿಗೆ, ಅನಂತರ ಕ್ರಮವಾಗಿ ದ್ವಿಜಪಂಕ್ತಿಗೆ, ಅರಸು ಸಮೂಹಕ್ಕೆ, ಪಂಡಿತವರ್ಗಕ್ಕೆ, ಮಂತ್ರಿ ಪ್ರಧಾನ ಸಮೂಹಕ್ಕೆ, ಅನಂತರ ಭೂರಿ ಸಭೆಗೆ ಬಡಿಸುತ್ತಾರೆ. ಮೊದಲು ನಿಂಬೆ, ಹೇರಳೆ, ಬಿಲ್ವಪತ್ರೆಕಾಯಿ, ಮಾದಲ, ಮೆಣಸಿನಕಾಯಿ, ಕಳಲೆ, ಗಾವಟೆ—ಮುಂತಾದವುಗಳಿಂದ ಮಾಡಿದ ಉಪ್ಪಿನಕಾಯಿಗಳನ್ನೂ, ಮಾವು ಹಲಸು—ಮುಂತಾದ ಹಣ್ಣುಗಳನ್ನೂ ಬಡಿಸುತ್ತಾರೆ. ಅನಂತರ ಕಾಯಿಸಾಸುವೆ, ಮೆಣಸು ಬೆರೆತ ಮೊಸರುಗಾಯಿ, ಪಚ್ಚಡಿ, ವಿವಿಧ ಸೀಕರಣೆ, ಎಳೆಗಾಯಿ, ಪುಳಿಗಾಯಿ, ಹಪ್ಪಳ, ಸಂಡಿಗೆ, ಕವಲಿ, ಪರಡಿ, ಸೇವಿಗೆ, ಹುರಿದ ಬಾಳಕ, ಕಡುಬು, ಬೆಲ್ಲದ ಹೂರಿಗೆ, ಮಂಡಿಗೆ, ಹೂರಣವಿಕ್ಕಿ ಮುಚ್ಚಿದ ಹಿಡಿಗಡುಬು, ಲಡ್ಡುಗೆ, ಕರಜಿಕಾಯಿ, ಸುಕ್ಕಿನುಂಡೆ, ಹೆಸರಹೂರಿಗೆ, ವಡೆ, ಸಕ್ಕರೆ ಬುರುಡೆ, ಬೀಸುಹೂರಿಗೆ, ಬಿಳಿ ಮಂಡಿಗೆ, ದೋಸೆ, ಚಕ್ಕುಲಿ, ಸಣ್ಣಸೇವಿಗೆ, ಚೆನ್ನಾಗಿ ಕಾಯಿಸಿ ಮಾಡಿದ ಚಿಲುಪಾಲುಂಡೆ, ಮೂರುಂಡೆ, ರಾಜಾನ್ನ, ಪರಮಾನ್ನ, ರಸಾಯನ—ಮುಂತಾದುವನ್ನು ಕ್ರಮವಾಗಿ ಬಡಿಸುತ್ತಾರೆ. ಬಡಿಸಿದ್ದೆಲ್ಲ ಮುಗಿದನಂತರ ಧರ್ಮರಾಯ ಹೇಮಗಿಂಡಿಯ ಉದಕದಿಂದ ಆಪೋಶನವನ್ನು ಹಾಕುತ್ತಾನೆ. ಭೂರಿಸಭೆ ಉಂಡು ದಣಿಯುತ್ತದೆ ಎಲ್ಲರೂ ಕೈ ತೊಳೆಯುತ್ತಾರೆ. ಆಮೇಲೆ ಹಣ್ಣಡಕೆಯ ಹೋಳುಗಳ, ಹೊಸ ಸುಣ್ಣ ಕರ್ಪೂರದ ಹಳುಕುಗಳ ಸಹಿತ ಸಣ್ಣ ಸಳ ಕಡಿಯಾದ ಬಿಳಿಯೆಲೆಯಿಂದ ಕೂಡಿದ ವೀಳಯವನ್ನು ಹೊನ್ನ ತಳಿಗೆಗಳಲ್ಲಿಟ್ಟು ಎಲ್ಲರಿಗೂ ಕೊಡುತ್ತಾರೆ.

ಭೋಜನಾನಂತರ ಐರಾವತಸಹಿತ ದೇವಲೋಕದ ಎಲ್ಲ ವಸ್ತುಗಳನ್ನೂ ಪೂಜಿಸಿ, ಇಳಿದ ಮಾರ್ಗದಲ್ಲಿಯೇ ಮೇಲೆ ತೆರಳುವುದು ಎಂದು ಪಾಂಡವರು ಕೈಮುಗಿಯುತ್ತಾರೆ. ಅವೆಲ್ಲವೂ ಅದೇ ಮಾರ್ಗದಲ್ಲಿ ಬಂದು ಸುರಪುರವನ್ನು ಸೇರುತ್ತವೆ. ಅನಂತರ ಅರ್ಜುನ ಶರಸೇತುವನ್ನು ಕಳಚುತ್ತಾನೆ. ಪಾಂಡವರು ಬಂದ ಅರಸರನ್ನೆಲ್ಲ ಉಚಿತ ಉಡುಗೊರೆಗಳಿಗಡ ಬೀಳ್ಕೊಡುತ್ತಾರೆ. ಕೃಷ್ಣನೂ ಬೀಳ್ಕೊಂಡು, ಹೊರಟು, ದ್ವಾರಕೆಯನ್ನು ಸೇರುತ್ತಾನೆ. ಫಲಶ್ರುತಿಯೊಂದಿಗೆ ಕಾವ್ಯ ಮಂಗಳವಾಗುತ್ತದೆ.

ಗಂಗೆ ಗೋದಾವರಿಯು ನರ್ಮದೆ
ತುಂಗ ಭದ್ರೆಯ ಯಮುನೆ ಸರಸತಿ
ಹಿಂಗದಾ ಪಾತಕವ ಕೆಡಿಸುವ
ವಾರಣಾಸಿಯಲಿ ।
ಸಂಗವಿಕ್ರಮವೆನಿಪ ಕಾಶಿಯ
ಸಂಗತಿಯ ವರ ಸ್ನಾನಫಲವಹು
ದಂಗದೈರಾವತದ ಕಥೆಯನು ಕೇಳ್ದ
ಮನುಜರಿಗೆ ॥

★

# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮಸಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಿನ ವಾರ್ಷಿಕ ಬಡ್ಡಿಯಿಂದ ಯಾತ್ರಿಕರಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.

* ಒಂದು ಕುಟುಂಬದ ಐದು ಮಂದಿ ಅಥವಾ ಎರಡು ಸಂಸ್ಥೆಗಳೂ ಸೇರಿ ದತ್ತಿಯ ಹಣವನ್ನು ನೀಡಬಹುದು.

* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.

* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆಯಿಸಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.

* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.

* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

1. ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ — ರೂ 10 ಲಕ್ಷ
2. ಶ್ರೀ ಮಾನಸಿಂಗ್ ಶಾ, ಬೊಂಬಾಯಿ — ರೂ 20 ಲಕ್ಷ
3. ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ — ರೂ 10 ಲಕ್ಷ
4. ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ — ರೂ 10 ಲಕ್ಷ
5. ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್, ಬೊಂಬಾಯಿ) ರೂ 10 ಲಕ್ಷ
6. ಶ್ರೀ ಬಿ. ಎಂ. ಖೈತಾನ್, ಕಲ್ಕತ್ತ — ರೂ 10 ಲಕ್ಷ
7. ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ — ರೂ 10 ಲಕ್ಷ
8. ಶ್ರೀ ರಾಮನಾಥಗೋಯಂಕಾ, ಮದರಾಸು. — ರೂ 10 ಲಕ್ಷ
9. ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ — ರೂ 10 ಲಕ್ಷ

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

# ಸರಸ್ವತೀದೇವಿ

ಲಕ್ಷ್ಮಿ ಹಾಗೂ ಸರಸ್ವತಿ- ಇವರಿಬ್ಬರೂ ಭಾರತೀಯರ ಸುಸಂಸ್ಕೃತ ಜೀವನದ ಆಧಾರಸ್ತಂಭರೆಂದು ಕರೆಸಿಕೊಳ್ಳುತ್ತಾರೆ. ರಾಷ್ಟ್ರಪುರುಷನಿಗೆ ಇವರು ಆಧಿ ದೇವತೆ ಹಾಗೂ ಪ್ರತ್ಯಧಿದೇವತೆಗಳಾಗಿ ಪೂರಣೆ ಸಿದ್ದಾರೆ. ಲಕ್ಷ್ಮಿಯ ಅನುಗ್ರಹವಿಲ್ಲದೆ ಜೀವನ ದುರ್ಲಭ. ಅದೇರೀತಿ ಆತ್ಮ ಶಾಂತಿಗೆ ಸರಸ್ವತಿಯ ಅನುಗ್ರಹ ಅತಿಮುಖ್ಯ. ಶಾರದೆಯ ಬಲದಿಂದಲೇ ಲಕ್ಷ್ಮಿ ಲೋಕ ಪ್ರಸಿದ್ಧಿಯನ್ನು ಪಡೆದಳು. ಲಕ್ಷ್ಮಿ ಹಾಗೂ ಸರಸ್ವತಿ ಇವರಿಬ್ಬರೂ ವೈದಿಕ ಸಂಪ್ರದಾಯದ ಮಡಿಲಲ್ಲಿ ಬೆಳೆದವರು. ಇವರಿಬ್ಬರಲ್ಲಿ ಹಿರಿಯಳಾದವಳಾರು?

ದೇವ ದಾನವರು ಸಮುದ್ರ ಮಂಥನ ಮಾಡಿದಾಗ ಲಕ್ಷ್ಮಿ ಆ ಕ್ಷೀರಸಾಗರ ಮಧ್ಯದಲ್ಲಿ ಕಾಣಿಸಿ ಕೊಂಡಳು. ಆ ದೇವಿಗೆ ದೇವ ದಾನವರು ಋಷಿಮುನಿಗಳು ಬಹು ಆದರದ ಸ್ವಾಗತ ತೋರಿದರು. ಇವರ ಮಧ್ಯದಲ್ಲಿ ಸರಸ್ವತಿಯೂ ಉಪಸ್ಥಿತಳಿದ್ದು ಅವಳು ಲಕ್ಷ್ಮಿಗೆ ತನ್ನ ಕೊರಳಲ್ಲಿದ್ದ ರತ್ನಾಭರಣವನ್ನು ತೊಡಿಸಿದಳೆಂಬ ಮಾತನ್ನು ಪುರಾಣಗಳು ತಿಳಿಸುತ್ತವೆ. ಅಂದಮೇಲೆ ಸರಸ್ವತಿಯು ಲಕ್ಷ್ಮಿಗಿಂತ ಹಿರಿಯಳು ಎಂದು ಭಾವಿಸಲು ಅವಕಾಶವಿದೆ.

ಸರಸ್ವತಿಯನ್ನು ಶಾರದಾ ಎಂಬ ಹೆಸರಿನಿಂದಲೂ ಸಂಬೋಧಿಸಲಾಗಿದೆ. ಅವಳು ಬ್ರಹ್ಮಶಕ್ತಿ ಎಂದೆನಿಸಿದರೂ ಸ್ವತಂತ್ರಳು. ಬೌದ್ಧರು ಜೈನರು ಶಾಕ್ತರು ಈ ದೇವಿಯ ಭಕ್ತರು. ಪ್ರಜ್ಞಾಪಾರಮಿತಾ, ಮಂಜುಶ್ರೀ, ವಜ್ರಶಾರದೆ ಎಂಬೆಲ್ಲ ಹೆಸರಿನಿಂದ ಬೌದ್ಧರು ಕರೆದರೆ ಶ್ರುತದೇವಿ, ವಾಗೀಶ್ವರೀ, ವಾಗ್ವಾದಿನಿ, ಭಾರತಿ ಎಂಬ ಹೆಸರಿನಿಂದ ಜೈನರು ಕರೆದಿದ್ದಾರೆ. ಶಾಕ್ತರೂ ಇವಳನ್ನು ಸ್ತೋತ್ರ ಮಾಡಿದ್ದಾರೆ.

ಚಂದ್ರ ಪ್ರಭಾಂ ನೀಲಗಲ ಪ್ರಯಾನಾಂ
ತ್ರಿನೇತ್ರ ರಮ್ಯಾಂ ಸ್ವಗುಣಾ
ಪ್ರತುಷ್ಟಾಂ
ಪದ್ಮಾಸನಾಂ ತ್ವಾಂ
ಪ್ರಯುಜೇ ಕ್ಷಮಾಲಾ
ಸತ್ಪುಸ್ತಕಾಢ್ಯಾಂ ಚ ಮಯೂರ ಚಾರೇ

ಈ ಸ್ತೋತ್ರದಲ್ಲಿ ಅವಳು ವೀಣಾಪಾಣಿಯಾಗಿರುವ ಪ್ರಜ್ಞಾಶಾಲಿಯಾಗಿದ್ದಾಳೆ. ನಮ್ಮ ನಾಡಿನಲ್ಲಿ ಶೃಂಗೇರಿಯಲ್ಲಿರುವ ಶಾರದೆಯ ರೂಪವು ಇದೇ ರೀತಿಯಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಿದೆ

ಸರಸ್ವತಿಯಷ್ಟು ಪ್ರಾಚೀನ ದೇವತೆ ಬೇರೊಬ್ಬಳಿಲ್ಲ, ಮಾನವನಿಗೆ ಎಂದು ವಾಣಿಯ ಸಾಕ್ಷಾತ್ಕಾರವಾಯಿತೋ ಅಂದೇ ಈ ದೇವಿಯ ಅನುಗ್ರಹವು ಆತನ ಮೇಲಾಯಿತು. ವಿಶ್ವದಲ್ಲಿ ತಾನು ಕಂಡ ವಿಸ್ಮಯಗಳನ್ನೆಲ್ಲ ಆತನು ಗಾಥಾರೂಪದಲ್ಲಿ ಹೇಳತೊಡಗಿದ. ಇದರಿಂದಾಗಿ ಮಾನವನಿಗೊಲಿದ ಮೊದಲು ದೇವತೆ ಎಂದರೆ ಸರಸ್ವತಿ ಎಂಬ ಮಾತಿನಲ್ಲಿ ಯಾವಸಂದೇಹವೂ ಇಲ್ಲ. ವಾಣಿಯ ಸಂಸ್ಕಾರವಾದಂತೆಲ್ಲ ಸರಸ್ವತಿಯ ಸಾಕ್ಷಾತ್ಕಾರವು ಆತನಿಗೆ ಲಭಿಸತೊಡಗಿತು. ಋಷಿಗಳ ಹೃದಯದಿಂದ ಹೊರಸೂಸಿ ಬಂದ ಆನಂದಾದಿಭಾವಗಳೆಲ್ಲ ಮಂತ್ರಗಳಾಗಿ ಪರಿಣಮಿಸಿದವು. ಯಜ್ಞಯಾಗಾದಿ ಕರ್ಮಗಳಿಂದ ಅವರು ಸರಸ್ವತಿಯ ಅನುಗ್ರಹವನ್ನು ಪಡೆಯ ತೊಡಗಿದರು.

ವೇದ ಕಾಲದ ದೇವತೆಯಾದ ಸರಸ್ವತಿಯನ್ನು ಕುರಿತು ಋಗ್ವೇದದಲ್ಲಿ ಸುಮಾರು ಮೂವತ್ತು ಮೂವತ್ತೈದು ಸ್ಥಳಗಳಲ್ಲಿ ಉಲ್ಲೇಖವು ದೊರೆಯುತ್ತದೆ ಆದರೆ ಬಹುಭಾಗದ ವರ್ಣನೆಯು ಪ್ರವಾಹವನ್ನೇ ಸೂಚಿಸುತ್ತದೆ "ಅಂಬೀತಮೇ ನದೀತಮೇ ದೇವೀತಮೇ ಸರಸ್ವತಿ" ಎಂಬ ಮಂತ್ರವು ಸರಸ್ವತಿ ಎಂಬ ನದಿಯನ್ನು ಕುರಿತಾದುದು.

ಶ್ರೀ ಆದ್ಯರಾಮಾಚಾರ್ಯ

ಪ್ರಾಣೋದೇವಿ ಸರಸ್ವತೀ ವಾಜೇಭಿರ್ವಾಜಿನೀವತಿ – ಎಂಬ ಮಂತ್ರವು ಸರಸ್ವತಿಯನ್ನೇ ಕುರಿತಾದುದು. ಇವಳು ಬುದ್ಧಿಗೆ ಚೈತನ್ಯದಾಯಿನಿಯಾದವಳು. ಸರಸ್ವತಿಗೆ ಭಾರತಿ ಎಂಬ ಹೆಸರೂ ಇದೆ. ಋಷಿಗಳು ಯಾವ ನೆಲದಲ್ಲಿ ಮೊದಲು ಯಜ್ಞ ಕುಂಡಗಳನ್ನಾರಂಭಿಸಿದರೋ ಆ ಯಜ್ಞಕ್ಕಾಗಿ ಯಾವ ಅಗ್ನಿಯನ್ನು ಸೃಷ್ಟಿ ಮಾಡಿದರೋ ಆ ಅಗ್ನಿಯನ್ನು ಭಾರತಿ ಎಂಬುದಾಗಿ ಕರೆದಿದ್ದಾರೆ. ಸರಸ್ವತಿ ನದಿಯ ಧಾರೆಯ ಮೇಲೆ ಪ್ರಾರಂಭವಾದ ಈ ಅಗ್ನಿಕಾರ್ಯದಲ್ಲಿ ಅವರು ಅನೇಕ ಋಚಗಳನ್ನು ಗಾಥಾರೂಪದಲ್ಲಿ ಹಾಡಿ ಕೊಂಡಾಡತೊಡಗಿದರು.

ಪುರಾಣಕಾಲದಲ್ಲಿ ವಾಣಿ ಸರಸ್ವತಿ ಇವರಿಬ್ಬರಲ್ಲಿ ಏಕರೂಪವನ್ನು ಕಾಣಬೇಕೆನಿಸಿತು. ಅದಕ್ಕಾಗಿಯೆ ಕಥೆಯೊಂದು ನಿರ್ಮಾಣಗೊಂಡಿತು. ಪದ್ಮ ಪುರಾಣದಲ್ಲಿಯ ಸೃಷ್ಟಿ ಖಂಡವೆಂಬ ಭಾಗದಲ್ಲಿ ನಾವು ಇದನ್ನು ಕಾಣಬಹುದು.

ವಿಶ್ವದಲ್ಲಿ ವಡಬಾಗ್ನಿಯು ಕಾಣಿಸಿಕೊಂಡಿತು. ಮಾನವನಿಗೇ ಅಲ್ಲ, ದೇವತೆಗಳಿಗೂ ಸಹ ಅದರ ತಾಪವನ್ನು ಸಹಿಸಲಸಾಧ್ಯವಾಯಿತು. ದೇವತೆಗಳು ಆ ಅಗ್ನಿಯನ್ನು ಸಮುದ್ರದಲ್ಲಿ ಹಾಕುವಂತೆ ಸರಸ್ವತಿಯನ್ನು ಕೇಳಿಕೊಂಡರು. 'ನಾನು ಕುಮಾರಿ ಅಗ್ನಿಸ್ಪರ್ಶದಿಂದ ನನ್ನ ಕೌಮಾರ್ಯ ನಾಶವಾಗುವುದು. ಆದುದರಿಂದ ಈ ಕೆಲಸವು ನನ್ನಿಂದಾಗದು' ಎಂದು ಹೇಳಿದಾಗ ದೇವತೆಗಳ ಗುಂಪು ಬ್ರಹ್ಮನನ್ನು ಕಂಡು ಸರಸ್ವತಿಯಿಂದ ಈ ಕಾರ್ಯವನ್ನು ಮಾಡಿಸುವಂತೆ ಪ್ರಾರ್ಥಿಸಿದರು. ವಿಧಾತನು ಸರಸ್ವತಿಗೆ ಅಪ್ಪಣೆ ಮಾಡಿದ. ಸರಸ್ವತಿಗೆ ಬಲು ದುಃಖವಾಯಿತು. ಅವಳು ಜಲರೂಪದಿಂದ ಹರಿಯತೊಡಗಿದಳು. ಉತ್ತಂಕ ಮುನಿಯ ಆಶ್ರಮದಾತ್ತ ಬಂದಾಗ ಅವಳಿಗೆ ವಿಷ್ಣುವಿನ ದರ್ಶನವು ಲಭಿಸಿತು. ವಡವಾಗ್ನಿಯನ್ನು ಆ ದೇವನು

# ತಿ. ತಿ. ದೇವಸ್ಥಾನಗಳು, ತಿರುಪತಿ.

# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

**ಕನ್ನಡ :**

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು –ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

**ಮಕ್ಕಳಿಗಾಗಿ :**

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

**ಹಿಂದಿ :**

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

**ಸಂಸ್ಕೃತ :**

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ ಸಂ–ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)**

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,

ತಿ. ತಿ. ದೇ. ತಿರುಪತಿ.

ಸುವರ್ಣ ಪಾತ್ರೆಯಲ್ಲಿ ಹಿಡಿದಿಟ್ಟು ಅವನ್ನು ಸರಸ್ವತಿಗೆ ಒಪ್ಪಿಸಿದ, ಮುಂದೆ ಪಕ್ಷಿ ಮಕ್ಕೆ ಕರೆದು ಪುಷ್ಕರ ಸರೋವರದಲ್ಲಿ ಕಾಣಿಸಿಕೊಂಡು ಗೊಂಡಾರಣ್ಯವನ್ನು ಪ್ರವೇಶ ಮಾಡಿದಳು. ಕಥೆಯಿಂದ ಬ್ರಹ್ಮಕುಮಾರಿಯಾಗಿದ್ದ ಸರಸ್ವತಿಯು ಕಾರಣಾಂತರಗಳಿಂದ ಜಲರೂಪಧಾರಣ ಮಾಡಿ ಹರಿದಳು ಎಂಬುದು ಸಾಮಾನ್ಯ ಅರ್ಥವಾಗಿ ತೋರುತ್ತದೆ.

"ದೇವೀಂ ವಾಚಮಜನಯಂತ ದೇವಾಃ" ವಾಣಿಯನ್ನು ದೇವತೆಗಳು ಸೃಷ್ಟಿಸಿದರು. ಇವಳು ಮಹಾಭಾರತದಲ್ಲಿ ಬ್ರಹ್ಮನ ಮಗಳಾಗಿ ತೋರಿದಳು. ದೇವೀ ಭಾಗವತದಲ್ಲಿ ಇವಳಿಗಾಗಿಯೇ ಸ್ವತಂತ್ರ ಕಥೆ ಹುಟ್ಟಿತು.

ಶ್ರೀ ಕೃಷ್ಣನ ಸಖಿಯಾಗಿದ್ದ ರಾಧಾಳ ಜೀವಾತ್ಮದಿಂದ ಸರಸ್ವತಿಯು ಜನನವಾಯಿತು. ಮುಂದೆ ಕೃಷ್ಣನನ್ನು ಹೊಂದುವ ತವಕ, ಆಗ ಆತನು ದ್ವಿಭುಜರೂಪದ ನಾರಾಯಣನ ಧ್ಯಾನ ಮಾಡುವುದರಿಂದ ಕೃತಾರ್ಥಳಾಗುವೆ ಎಂದು ಸಮಾಧಾನ ಪಡಿಸಿದ. ಸಂಸ್ಕೃತ ಸಾಹಿತ್ಯದಲ್ಲಿ ಗುಹ್ಯಾರ್ಥವನ್ನು ಸೂಚಿಸುವ ಅನೇಕ ರಚನೆಗಳಿವೆ. ಇಲ್ಲಿ ರಾಧಾ ಎಂದರೆ ಆರಾಧನೆ ಎಂದರ್ಥ. ಆರಾಧನೆ ಉಪಾಸನೆಗಳಿಂದ ಸಿದ್ಧಿಯನ್ನು ಹೊಂದಬಹುದು.

ಸರಸ್ವತಿಯು ಗಾಯತ್ರಿ ಸಾವಿತ್ರಿ ಎಂಬ ರೂಪದಿಂದ ಬ್ರಹ್ಮ ಪತ್ನಿಯ ರೊಂದಿಗೆ ನಡೆಜೀವಿ ಎಂದೆನಿಸಿಕೊಂಡಳು. ಇದರಿಂದಾಗಿ ಪರ್ಯಾಯ ರೂಪದಲ್ಲಿ ಬ್ರಹ್ಮಪತ್ನಿ ಎಂದೆನಿಸಿಕೊಂಡಳು. ಯಜುರ್ವೇದದಲ್ಲಿ ಅಶ್ವಿನೀ ದೇವತೆಗಳೊಂದಿಗೆ ಇವಳ ಸಂಬಂಧವನ್ನು ಹೇಳಲಾಗಿದೆ. ಕೆಲವು ಪುರಾಣಗಳಲ್ಲಿ ಇವಳು ಗಣಪತಿಯ ಅರ್ಧಾಂಗಿ ಎಂದು ವರ್ಣಿಸಲಾಗಿದೆ. ಮತ್ತೆ ಕೆಲವು ಕಡೆಗಳಲ್ಲಿ ಲಕ್ಷ್ಮಿಯಂತೆ ಇವಳೂ ವಿಷ್ಣು ಪತ್ನಿಯನ್ನಾಗಿ ವರ್ಣಿಸಿರುವುದೂ ಉಂಟು. ಈ ಎಲ್ಲ ಗೊಂದಲಗಳಿಂದಾಗಿ ಅವಳ ನಿಜವಾದ ವಾಸಸ್ಥಳ ಯಾವುದು ಎಂಬುದನ್ನು ಹೇಳುವುದು ಬಹುಕಠಿಣವೆನಿಸುತ್ತದೆ.

ದೇವತೆಗಳಿಗೆಲ್ಲ ಒಂದಿಲ್ಲೊಂದು ವಾಹನವಿದ್ದೇ ಇದೆ. ಬ್ರಹ್ಮನಿಗೆ ಹಂಸವಾಹನ. ಅಂದಮೇಲೆ ಇದು ಸರಸ್ವತಿಯ ತವರಿನ ಹಕ್ಕು ಎಂದಾಯಿತು. ನಮೋ ಬ್ರಹ್ಮ ಕುಮಾರಿ, ಹಂಸಾರೂಢ ವಾಗೀಶ್ವರಿ ಎಂಬ ಸ್ತುತಿವಾಚಕ ಸ್ತೋತ್ರಗಳಲ್ಲಿ ಅವಳು ಹಂಸವಾಹಿನಿಯಾಗಿದ್ದು ಸರೋವರದಲ್ಲಿ ವಿಹಾರ ಮಾಡುವವಳೆಂದು ರಾಜ ತರಂಗಿಣಿಕಾರ ವರ್ಣನೆಮಾಡಿರುವುದನ್ನು ಕಾಣಬಹುದು. ಏಳನೆ ಶತಮಾನಕಾಲದಲ್ಲಿದ್ದ ನಾಣ್ಯಗಳ ಮೇಲೆ ಸರಸ್ವತಿಯು ಪಾದದಡಿಯಲ್ಲಿ ಹಂಸವಿರುವುದನ್ನು ಕಾಣಬಹುದೆಂದು ಪ್ರಾಧ್ಯಾಪಕ ಗೋಡೆಯವರು ಹೇಳುತ್ತಾರೆ. ಇನ್ನು ಹದಿನೇಳನೇ ಶತಮಾನದವರೆಗೆ ಬರೆಯಲ್ಪಟ್ಟ ಹಸ್ತಲಿಖಿತ ಗ್ರಂಥಗಳ ಮೇಲೆಲ್ಲ ಹಂಸವಾಹಿನಿಯಾದ ಸರಸ್ವತಿ ಚಿತ್ರಬಿಡಿಸಿರುವುದನ್ನು ಕಾಣಬಹುದು. ಜೈನರ ಪ್ರಥಮ ತೀರ್ಥಂಕರರೆನಿಸಿದ ಭಗವಾನ್ ವೃಷಭ ದೇವನು ಆರಾಧಿಸಿದ ದೇವತೆಯ ಹೆಸರು ಚಕ್ರೇಶ್ವರಿ ಎಂದಿದ್ದು ಅವಳ ವಾಹನವೂ ಸಹ ಹಂಸವೇ ಇರುವುದರಿಂದ ಅವಳು ಸರಸ್ವತಿ ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ನವಿಲಿನ ಮೇಲೆ ಕುಳಿತ ಚಿತ್ರಗಳನ್ನೂ ನಾವು ಕಾಣುತ್ತೇವೆ. ಗಣಪತಿ ಹಾಗೂ ಸರಸ್ವತಿ ಇವರಿಬ್ಬರೂ ಪ್ರಥಮ ವಂದ್ಯರೆಂಬುದಾಗಿ ಮಕ್ಕಳಿಗೆ ಪಾಠ ಹೇಳಿ ಕೊಡುತ್ತೇವೆ. ಹಂಸವಾಹಿನಿಯಾದ ಶಾರದೆಗೆ ಮಯೂರವಾಹನವು ಬಂದುದಾದರೂ ಹೇಗೆ ಎಂಬ ವಿಚಾರ ಮಾಡುವುದು ಅಗತ್ಯವೆನಿಸುತ್ತದೆ.

ಜೈನರು ಶ್ರುತದೇವಿ, ವಿದ್ಯಾದೇವಿ ಎಂಬ ದೇವತೆಯನ್ನು ಪೂಜಿಸುತ್ತಾರೆ. ಅವಳು ಬೇರಾರೂ ಅಲ್ಲ. ಸರಸ್ವತಿಯೇ ಆ ಹೆಸರಿನಿಂದ ಪೂಜೆಗೊಳ್ಳುವುದುಂಟು. ಶ್ವೇತಾಂಬರ ಜೈನರ ಸರಸ್ವತಿಯು ಶುಭ್ರಮಯವಾದ ಹಂಸವಾಹಿನಿಯಾದರೆ ದಿಗಂಬರ ಜೈನರ ದೇವತೆಯು ಮಯೂರ ಅಂದರೆ ನವಿಲನ್ನೇ ತನ್ನ ವಾಹನವನ್ನಾಗಿ ಮಾಡಿಕೊಂಡಿದ್ದಾಳೆ. ಜೈನರ ಪ್ರಭಾವದಿಂದಾಗಿ ಮಯೂರ ವಾಹಿನಿಯಾದ ಸರಸ್ವತಿಯನ್ನು ಹಿಂದುಗಳೆಲ್ಲರೂ ಪೂಜಿಸುತ್ತ ಬಂದಿರಬಹುದೆಂಬ ಮಾತಿಗೆ ಅವಕಾಶವಿದೆ. ಸರ್ವರಿಗೂ ಪ್ರಿಯವಾದ ಶಾರದೆಯ ಸ್ತೋತ್ರವು ಈ ಕೆಳಗಿನಂತಿದೆ.

ಯಾ ಕುಂದೇಂದು ತುಷಾರ ಹಾರ
ಧವಲಾ
ಯಾ ಶುಭ್ರ ವಸ್ತ್ರಾನ್ವಿತಾ
ಯಾ ವೀಣಾ ವರ ದಂಡ ಮಂಡಿತ ಕರಾ
ಯಾ ಶ್ವೇತ ಪದ್ಮಾಸನಾ
ಯಾ ಬ್ರಹ್ಮಾಚ್ಯುತ ಶಂಕರ
ಪ್ರಭೃತಿಭಿಃ
ದೇವೈಃ ಸದಾ ವಂದಿತಾ
ಸಾ ಮಾಂ ಪಾತು ಸರಸ್ವತೀ ಭಗವತೀ
ನಿಃ ಶೇಷ ಜಾಡ್ಯಾಪಹ

ಅವಳು ಶುಭ್ರವಸ್ತ್ರ ಧರಿಸಿದವಳು.ಹಂಸ ವಾಹಿನಿಯಾದವಳು.ನಿರ್ಮಲವಾದ ಜ್ಞಾನವನ್ನೀಯುವವಳು ಎಂದೆಲ್ಲ ಈ ಧ್ಯಾನ ಶ್ಲೋಕದಲ್ಲಿ ವರ್ಣಿಸಲಾಗಿದೆ.

ಆಶ್ವೀಜ ಮಾಸದ ಶುಕ್ಲಪಕ್ಷದಲ್ಲಿ ಬರುವ ಮೂಲಾ ನಕ್ಷತ್ರದ ದಿನ ಪ್ರತಿಯೊಬ್ಬರ ಮನೆಯಲ್ಲಿಯೂ ಈ ದೇವಿಯನ್ನು ಆಹ್ವಾನಿಸಲಾಗುತ್ತದೆ. ಪೂರ್ವಾ ಹಾಗೂ ಉತ್ತರಾಷಾಢಾ ಈ ದಿನಗಳಲ್ಲಿ ಪೂಜೆ, ಬಲಿ ಇತ್ಯಾದಿಗಳ ಕಾರ್ಯವು ನಡೆಯುತ್ತದೆ. ಶ್ರವಣ ನಕ್ಷತ್ರವಿದ್ದಾಗ ವಿಸರ್ಜನೆ ಮಾಡುತ್ತಾರೆ.

ಸರಸ್ವತಿಯು ಅಜ್ಞಾನವನ್ನು ದೂರ ಮಾಡಿ ದಿವ್ಯ ಜ್ಞಾನ ಪ್ರಕಾಶವನ್ನೀಯುವ ದೇವತೆ. ಜಡತ್ವವನ್ನು ದೂರಮಾಡಿ ಚೈತನ್ಯವನ್ನಿತ್ತು ಮಾರ್ಗದರ್ಶನ ಮಾಡುವ ಮಹಾದೇವತೆ ಇವಳು. ಆದುದರಿಂದ ಭಾರತೀಯರು ಲಕ್ಷ್ಮಿಗೆ ಯಾವ ಸ್ಥಾನಮಾನವನ್ನೀಯುತ್ತಾರೆಯೋ, ಅದೇ ಸ್ಥಾನಮಾನಗಳನ್ನು ಸರಸ್ವತಿಗೂ ಕೊಡುತ್ತ ಬಂದಿದ್ದಾರೆ. ಅವಳ ಅನುಗ್ರಹದಿಂದ ಸಕಲ ಚರಾಚರಗಳ ಜ್ಞಾನವು ನಮಗೆ ಲಭಿಸುತ್ತದೆ.ಆದುದರಿಂದ ಸರಸ್ವತಿಗೆ ನಮಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ.

★

(6 ನೇ ಪುಟದಿಂದ)

ವಾಗಿರುವುದನ್ನು ಅದರ ಇಚ್ಛೆ ಪ್ರೇರಣೆಗಳ ಚೌಕಟ್ಟಿನಲ್ಲಿಯೇ ಚೇತನಾಚೇತನಗಳು ಪ್ರವೃತ್ತಿಸುತ್ತಿರುವುದನ್ನೂ ಅರಿತುಕೊಳ್ಳಬೇಕಾಗುವುದು.

ಭಯಾದಸ್ಯಾಗ್ನಿಸ್ತಪತಿ
ಭಯಾತ್ತಪತಿ ಸೂರ್ಯಃ
ಭಯಾದಿಂದ್ರಶ್ಚ ವಾಯುಶ್ಚ
ಮೃತ್ಯುರ್ಧಾವತಿ ಪಂಚಮಃ

ಎಂದು ಕಠೋಪನಿಷತ್ತಿನಲ್ಲಿ ಎಲ್ಲವೂ ವಿಶ್ವ ತತ್ತ್ವದ ಅಧೀನವಾಗಿರುವುದನ್ನು ಪ್ರತಿಪಾದಿಸಿದೆ. ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದಂತರತರ ಯದಯಮಾತ್ಮಾ – ಎಂದು ಬೃಹದಾರಣ್ಯಕವು ಪರತತ್ತ್ವದಲ್ಲಿ ಅನಿತರ ಸಾಧಾರಣ ಪ್ರೇಮವನ್ನು ಮಾಡಲು ಬೋಧಿಸುತ್ತದೆ. ನಮ್ಮ ಜೀವನವು ಮಧುರವಾಗಿರಲು ನಾವು ಪ್ರೀತಿಸುವ ಪುತ್ರ, ಪತ್ನಿ ವಿತ್ತ ಭೂತಾದಿಗಳ ಮೇಲಿನ ನಮ್ಮ ಪ್ರೇಮಕ್ಕೂ ಪರಮಾತ್ಮಪ್ರೇಮವೇ ಮಧ್ಯಬಿಂದುವಾಗಿದೆ. ಪರಮಾತ್ಮ ಪ್ರೇಮವೇ ಪ್ರವರ್ತಕವಾಗಿದೆ. 'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಪತಿಃ, ಪ್ರಿಯೋ ಭವತಿ ನ ವಾ ಅರೇ ಜಾಯಾಯಾಃ ಕಾಮಾಯ ಜಾಯಾ ಪ್ರಿಯಾ ಭವತಿ ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ' ಎಂಬ ಸುಪ್ರಸಿದ್ಧವಾದ ಬೃಹದಾರಣ್ಯಕದ ವಾಕ್ಯಗಳಲ್ಲಿ ಜೀವನದಲ್ಲಿಯ ಪ್ರೇಮ ಪ್ರವಾಹಕ್ಕೆಲ್ಲ ಪರಮಾತ್ಮ ಪ್ರೇಮವೇ ನೆಲೆಯಾಗಿರಬೇಕೆಂದು ಸುಂದರವಾಗಿ ಪ್ರತಿಪಾದಿಸಲಾಗಿದೆ.

ಅವನು ಇಚ್ಛಿಸಿದಂತೆಯೇ ಪ್ರವೃತ್ತಿಗಳೂ, ಕೃತಿಗಳೂ ಕೃತಿಫಲಗಳೂ ಆಗುವವು. (ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ, ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ). ಏಷಹ್ಯೇವ ಸಾಧುಕರ್ಮ ಕಾರಯಂತಿ ತಂ ಯಮೇಭ್ಯೋ ಲೋಕೇಭ್ಯೋ ಉನ್ನಿನೀಷತ ಏಷ ಉ ಏವಾ ಸಾಧು ಕರ್ಮ ಕಾರಯಂತಿ ತಂ ಯಮಧೋ ನಿನೀಷತ ಏಷ ಲೋಕಪಾಲಃ ಏಷ ಲೋಕಾಧಿಪತಿಃ ಏಷ ಲೋಕೇಶಃ ಎಂದು ಕೌಷೀತಕೀ ಉಪನಿಷತ್ತಿನಲ್ಲಿ ಪರಮಾತ್ಮನೇ ಸೂತ್ರಧಾರನು ಎಂದು ಪ್ರತಿಪಾದಿಸಿದೆ. ಹೀಗೆ ನಾವು ಪರತತ್ತ್ವದ ಅಧೀನರೆಂಬ ಭಾವನೆಯನ್ನು ಯಾವಾಗಲೂ ಜಾಗ್ರತವಾಗಿಟ್ಟುಕೊಂಡು ಅಹಂಕಾರ ಮಮಕಾರಗಳನ್ನು ಕಳೆದುಕೊಂಡು ಪರತತ್ತ್ವದಲ್ಲಿ ಅನಿತರ ಸಾಧಾರಣ ಪ್ರೇಮದ ಆಧಾರದ ಮೇಲೆ ನಮ್ಮ ಪರಿಸರದಲ್ಲಿಯ ವ್ಯಕ್ತಿ ಮತ್ತು ವಸ್ತುಗಳ ಬಗ್ಗೆ ಮೈತ್ರೀ ಕರುಣಾ ಮೋದ ಭಾವಗಳನ್ನು ತಾಳಿ ಅಭಿಮಾನವನ್ನೂ ಅಭಿನಿವೇಶವನ್ನೂ ಹಿಂದಕ್ಕೆ ಸರಿಸಿ ವಿಹಿತ ಕರ್ಮಗಳನ್ನು ಸಮರ್ಪಣ ಬುದ್ಧಿಯಿಂದಲೂ ದ್ವಂದ್ವಾತೀತರಾಗಿಯೂ ಮಾಡುವುದೇ ಉಪನಿಷತ್ತುಗಳು ನಮಗೆ ಬೋಧಿಸುವ ಜೀವನದೃಷ್ಟಿ.

ಇಂಥ ದೃಷ್ಟಿಯನ್ನಿಟ್ಟುಕೊಂಡು ಜೀವನ ಯಾತ್ರೆಯನ್ನು ಸಾಗಿಸುವಾಗ ಬರುವ ಸಂದೇಹಗಳಿಗೂ,ಧರ್ಮ ಸಂಕಟಗಳಿಗೂ ಉಪನಿಷತ್ಕಾರರು ಒಂದು ವ್ಯಾವಹಾರಿಕವಾದ ಸೂಚನೆಯನ್ನು ಮಾಡಿರುವರು. ಕರ್ತವ್ಯದ ವಿಷಯದಲ್ಲಿಯಾಗಲೀ ನಡತೆಯ ವಿಷಯದಲ್ಲಿಯಾಗಲೀ ಸಂದೇಹ ಬಂದರೆ ಧರ್ಮಿಷ್ಠರೂ, ಜಾಗ್ರತರೂ, ವಿಚಾರಶೀಲರೂ
ಆದವರು ಯಾವ ರೀತಿ ನಡೆದುಕೊಳ್ಳುವರೋ
ರೀತಿ ನಡೆದುಕೊಳ್ಳಬೇಕು. ಅಲ್ಲದೆ ನಿತ್ಯದ ಜೀವ
ದಲ್ಲಿ ಅನುಸರಿಸಬೇಕಾದ ಕೆಲವು ಸತ್ಸಂಗತಿಗಳನ್ನ
ಹೀಗೆ ಹೇಳುವರು (ಅಥ ಯದಿ ತೇ ಕರ್ಮ
ವಿಚಿಕಿತ್ಸಾ ವಾ ವೃತ್ತ ವಿಚಿಕಿತ್ಸಾ ವಾ ಸ್ಯಾ
ಯೇ ತತ್ರ ಬ್ರಾಹ್ಮಣಾಃ ಸಮ್ಮರ್ಶಿನಃ ಅಲೂಕ್ಷಾ
ಧರ್ಮಕಾಮಾಃ ಸ್ಯುಃ ಯಥಾ ತೇ ತತ್ರವರ್ತೇರ
ತಥಾ ತತ್ರ ವರ್ತೇಥಾಃ) ಸತ್ಯ, ಧರ್ಮ, ಕು
ಮತ್ತು ಕಲ್ಯಾಣಕರವಾದುದನ್ನು ಮಾಡಲು
ಬಾರದು. (ಸತ್ಯಾನ್ನ ಪ್ರಮದಿತವ್ಯಂ ಧರ್ಮಾ
ಪ್ರಮದಿತವ್ಯಂ ಕುಶಲಾನ್ನ ಪ್ರಮದಿತವ್ಯ
ಭೂತ್ಯೈ ನ ಪ್ರಮದಿತವ್ಯಂ) ಉಪದೇಶವ
ಮಾಡುವವರೂ ಕೂಡ ತಮ್ಮಲ್ಲಿಯೂ ಕೊ
ಯಿರಬಹುದೆಂಬ ಮಾತನ್ನು ಅರಿತಿರಬೇಕು. ತ
ದೆಲ್ಲವನ್ನು ಪರರು ಅನುಸರಿಸಲೇಬೇಕೆಂಬ ಆಗ್ರ
ವಿರಬಾರದು ಎಂಬುದನ್ನು ಬಲ್ಲ ಉಪನಿಷತ್ಕಾರ
ನಮ್ಮಲ್ಲಿಯ ಒಳ್ಳೆಯದನ್ನಷ್ಟೇ ಅನುಸರಿಸಿ
ಎಲ್ಲವನ್ನು ಬೇಡ (ಯಾನ್ಯಸ್ಮಾಕಂ ಸುಚರಿತಾ
ತಾನಿ ಸೇವಿತವ್ಯಾನಿ ನೋ ಇತರಾಣಿ) ಎಂ
ಧೈರ್ಯವಾಗಿ ಹೇಳುವರು.

ಬೃಹದಾರಣ್ಯಕದ ಒಂದು ಸಂದರ್ಭದಲ್ಲಿ ನಾ
ಜೀವನದಲ್ಲಿ ಅನುಸರಿಸಬೇಕಾದ ಮೂರು ಮು
ಸಂಗತಿಗಳ ಬಗ್ಗೆ ಒಂದು ಸೊಗಸಾದ ಕಥೆ ಇ
ಒಮ್ಮೆ ದೇವತೆಗಳು, ಮನುಷ್ಯರು, ಅಸುರ
ಪ್ರಜಾಪತಿಯು ತಪಸ್ಸನ್ನು ಮಾಡಿದಂತೆ.
ಅವನು ಆ ಮೂವರಿಗೂ ದ ಎಂಬ ಅಕ್ಷರವ
ಕೊಟ್ಟು ಇದರಿಂದ ನಿಮ್ಮ ನಿಮ್ಮ ಕರ್ತವ್ಯವ
ತಿಳಿದುಕೊಳ್ಳಿರೆಂದು ಹೇಳಿದರಂತೆ. ಆಗ ಎಲ್ಲ
ತಿಳಿದುಕೊಂಡೆವು ಎಂದು ಹೇಳಿದರು. ಯಾ
ಯಾರು ಏನನ್ನು ತಿಳಿದುಕೊಂಡಿರೆಂದು ಕೇಳಿದ್ದ
ದೇವತೆಗಳು ನಮಗೆ ದ ಎಂದರೆ ದಮನವ
ಸಂಯಮವನ್ನು ಉಪದೇಶಿಸಿದ್ದೀರಿ ಎಂದ
ಮನುಷ್ಯರು ನಮಗೆ ದ ಎಂದು ದಾನವ
ಮಾಡಲು ಹೇಳಿದ್ದೀರಿ ಎಂದರು. ಅಸುರರು ನ
ದ ಎಂದರೆ ದಯೆಯನ್ನು ತೋರಿಸಲು ಹೇ
ಎಂದರು. ಹೀಗೆ ದಮ ದಾನ ಮತ್ತು ದಯೆಗ
ಜೀವನದಲ್ಲಿ ಅನುಸರಿಸಬೇಕಾದ ಸತ್ಸಂಗತಿಗ
ಒಟ್ಟಿನ ಮೇಲೆ ಸತ್ಯ, ಧರ್ಮ, ಕುಶಲಾದಿಗಳ
ದಮ ದಾನ, ದಯೆಗಳನ್ನು ಪರಿಪಾಲಿಸ
ಕೇವಲ ಭೋಗೈಕ ದೃಷ್ಟಿಯನ್ನು ತಾಳದೇ ಪ
ಪಶ್ವಾದಿಗಳಲ್ಲಿ ಜುಗುಪ್ಸಾ ಭಾವವನ್ನು ತಾಳ
ದ್ವಂದ್ವಾತೀತನೂ ನಿಸ್ಸಂಗನೂ ಆಗಿ ಭಗವ
ಸಮರ್ಪಣ ಬುದ್ಧಿಯಿಂದ ವಿಹಿತ ಕರ್ಮಗಳ
ಮಾಡುತ್ತ ಹೋಗುವುದೇ ಉಪನಿಷತ್ತುಗ
ಹಾಕಿಕೊಟ್ಟ ಜೀವನ ದೃಷ್ಟಿ.



ವಾರ್ತಾಲಹರಿ

## ಶ್ರೀ ವೆಂಕಟೇಶ್ವರಸ್ವಾಮಿಗೆ ಕಾಣಿಕೆಗಳು

ತಿರುಮಲೆಯ ಸ್ವಾಮಿಗೆ ಕಾನ್‌ಪುರದಲ್ಲಿ ಹೊಸದಾಗಿ ತಯಾರಿಸಲಾದ ವೆಸ್ಪ–ಕಾರ್–50 ಸ್ಕೂಟರ್ ಕಾಣಿಕೆಯಾಗಿ ಸಂದಿದೆ. ವೆಸ್ಪ–ಕಾರ್ ಸಂಸ್ಥೆಯ ನಿರ್ದೇಶಕ ಶ್ರೀ ಎಂ. ಎಸ್. ಮೆಹಲೆ ಅವರು ತಮ್ಮ ಸಂಸ್ಥೆ ತಯಾರಿಸಿದ ಮೊದಲ ಈ ಸ್ಕೂಟರ್ ಅನ್ನು ಆಲಯದ ಪೇಷ್ಕಾರ್ ಶ್ರೀ ಪೀರಯ್ಯನವರಿಗೆ ಸಮರ್ಪಿಸಿದರು. ಈ ಹಿಂದೆ ಸ್ವಾಮಿಗೆ ಇಂಡೊ–ಸುಜುಕಿ, ಹೀರೊ – ಹೊಂಡಾ, ಟಿ ವಿ. ಎಸ್–500 ಸ್ಕೂಟರ್‌ಗಳೂ ಸಮರ್ಪಿತವಾಗಿದ್ದವು ಎಂಬುದನ್ನು ಇಲ್ಲಿ ನೆನೆಯಬಹುದು.

ಸ್ವಾಮಿಯ ಹುಂಡಿಯ ಕಾಣಿಕೆಯನ್ನು ಲೆಕ್ಕಮಾಡುವಾಗ ಒಂದೇ ಬಾರಿಗೆ ಮೂರು ಲಕ್ಷ ಐವತ್ತುಸಾವಿರ ರೂಗಳ ಮೊತ್ತದ ನೂರು ರೂಗಳ ನೋಟುಗಳನ್ನು ಕಾಗದದಲ್ಲಿ ಸುತ್ತಿ ಹುಂಡಿಯಲ್ಲಿ ಅರ್ಪಿಸಿದ್ದುದನ್ನು ಕಂಡುಕೊಳ್ಳಲಾಗಿದೆ.

ಆಗಸ್ಟ್ ತಿಂಗಳ ಕೊನೆಯಲ್ಲಿ ಒಂದೇ ದಿನ ಸ್ವಾಮಿದರ್ಶನಕ್ಕೆ ವಿಪರೀತ ಜನ ಸಂದಣಿಯಿದ್ದಿತು. ಆ ದಿನ 33,600 ಮಂದಿ ಭಕ್ತರು ಸ್ವಾಮಿಯನ್ನು ಸಂದರ್ಶಿಸಿದರು. ಅಂದು ಹುಂಡಿಯಿಂದ 8,01,800 ರೂಗಳೂ ಅರ್ಜಿತ ಸೇವೆಯಿಂದ 4,11,961 ರೂಗಳೂ ಪ್ರಸಾದಗಳ ಮಾರಾಟದಿಂದ 2,58,380 ರೂಗಳೂ ಆದಾಯವಾಗಿ ವಿಶೇಷ ಪ್ರವೇಶದ 25 ರೂಗಳ ಟಿಕೆಟ್ ಮಾರಾಟವೂ ಸೇರಿದಂತೆ ಒಟ್ಟು ಎಲ್ಲ ಬಾಬ್ತಿನಿಂದ ರೂ 16,71,375 ರೂಗಳ ಆದಾಯವಾಯಿತೆಂದು ವರದಿಯಾಗಿದೆ.

## ಪ್ರಮಾಣ ವಚನ ಸ್ವೀಕಾರ

ಧಾರ್ಮಿಕ ದತ್ತಿ ಇಲಾಖೆಯ ನೂತನ ಕಮೀಷನರ್ ಆಗಿ ಅಧಿಕಾರವನ್ನು ಸ್ವೀಕರಿಸಿದ ಶ್ರೀ ತುಮ್ಮಲ ರಾಮಮೋಹನ ರಾವ್ ಅವರು ತಿ. ತಿ. ದೇ. ಟ್ರಸ್ಟ್ ಬೋರ್ಡ್‌ನ ಅಧಿಕಾರ ನಿಮಿತ್ತ ಸದಸ್ಯರಾಗಿ ಪ್ರಮಾಣವಚನವನ್ನು ಸ್ವೀಕರಿಸಿದರು.

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಬಂಗಾರದ ಬಾಗಿಲ ಬಳಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ಶ್ರೀ ರಾಮಮೋಹನ ರಾವ್ ಅವರಿಗೆ ಪ್ರಮಾಣ ವಚನವನ್ನು ನೀಡಿದರು. ಈ ಕಾರ್ಯಕ್ರಮದಲ್ಲಿ ತಿ ತಿ ದೇ. ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ವಿಶ್ವನಾಥಂ, ಡೆಪ್ಯೂಟಿ. ಇ. ಓ ಶ್ರೀ ಮುನಿಕೃಷ್ಣನ್, ಸಹಾಯಕ ಕಾರ್ಯನಿರ್ವಹಣಾಧಿಕಾರಿ ಶ್ರೀ ಆಂಜನೇಯುಲು ನಾಯುಡು, ದೇವಾಲಯ ಪೇಷ್ಕಾರ್ ಶ್ರೀ ಪೀರಯ್ಯ ಅವರುಗಳು ಹಾಜರಿದ್ದರು. ಪ್ರಮಾಣ ವಚನ ಸ್ವೀಕರಿಸಿದ ನಂತರ ಶ್ರೀಯುತರಿಗೆ ದೇವಾಲಯದ ಮುಖರ ಮಂಟಪದಲ್ಲಿ ವೇದೋಕ್ತ ಆಶೀರ್ವಾದವನ್ನು ನೀಡಲಾಯಿತು.

ನಂತರದಲ್ಲಿ ಎಸ್. ವಿ. ಅತಿಥಿಗೃಹದಲ್ಲಿ ನಡೆದ ತಿ. ತಿ. ದೇ. ಟ್ರಸ್ಟ್‌ಬೋರ್ಡ್‌ನ ಸಮಾವೇಶದಲ್ಲಿ ಶ್ರೀಯುತರು ಪ್ರಥಮ ಬಾರಿಗೆ ಭಾಗವಹಿಸಿದ್ದರು.

## ಸ್ವಾಮಿಗಾಗಿ ಹೂದೋಟ ನಿರ್ಮಾಣ

ಶ್ರೀ ವೆಂಕಟೇಶ್ವರಸ್ವಾಮಿಯ ಆರಾಧನೆಗಾಗಿ ಹಾಗೂ ತಿ ತಿ. ದೇ. ಗಳ ಇತರ ದೇವಾಲಯಗಳಲ್ಲಿನ ಪೂಜೆಗಳಿಗಾಗಿ ಅಗತ್ಯವಾದ ಹೂಗಳನ್ನು ಕೊಂಡುಕೊಳ್ಳದೆ ತಿ. ತಿ. ದೇ. ಗಳೇ ಬೆಳೆಯಲು ಅನುಕೂಲವಾಗುವಂತೆ ತಿರುಮಲೆಯ ಗೋಗರ್ಭದ ಬಳಿ 25 ಎಕರೆಗಳ ಸ್ಥಳದಲ್ಲಿ ಹೂದೋಟವನ್ನು ಬೆಳೆಸಲು ತಿ.ತಿ.ದೇ. ನಿರ್ಣಯಿಸಿದೆ.

ಇಲ್ಲಿನ ಹೂಗಳ ಬೆಳೆ ಬರುವವರೆಗೆ ವರ್ಷಕ್ಕೆ ಐದೂವರೆ ಲಕ್ಷ ರೂಗಳ ವೆಚ್ಚ ಮಾಡಲು ತಿ. ತಿ. ದೇ. ಯೋಚಿಸುತ್ತಿದೆ.

ತಿರುಮಲೆಯ ಎರಡೂ ಘಾಟ್ ರಸ್ತೆಗಳ ಅಂಚುಗಳಲ್ಲಿ ನೇರವಾಗಿ ಬೆಳೆಯುವ ಗಿಡಗಳನ್ನು ಬೆಳೆಸಲೂ ಸಂಕಲ್ಪಿಸಲಾಗಿದೆ. ಆದರೆ ಈ ಗಿಡಗಳು ಬೆಳೆದು ಅದರ ಶಾಖೆ ಬೇರುಗಳಿಂದಾಗಿ ಪಕ್ಕದ ರಕ್ಷಕ ಗೋಡೆಗಳಿಗೆ ಅಪಾಯವಾಗಬಾರದು ಎಂಬುದನ್ನೂ ಗಮನಿಸಲಾಗಿದೆ.

## ಹೊಸ ಪ್ರತ್ಯೇಕ ಕ್ಯೂಕಾಂಪ್ಲೆಕ್ಸ್

ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನಕ್ಕಾಗಿ ಬರುವ ಯಾತ್ರಿಕ ಸಂದೋಹ ದಿನದಿನವೂ ಹೆಚ್ಚುತ್ತಿರುವುದರಿಂದ ಈಗಿರುವ ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ಹಾಗೂ ಕಲ್ಯಾಣಕಟ್ಟೆಗಳು ಸಾಕಾಗದಿರುವುದೆಂದೂ, ಹಾಗಾಗಿ 25 ರೂಗಳ ಪ್ರತ್ಯೇಕ ಪ್ರವೇಶದ ಹೊಸ ಕ್ಯೂ ಕಾಂಪ್ಲೆಕ್ಸ್ ನಿರ್ಮಿಸುವ ಹಾಗೂ, ಇನ್ನೊಂದು ಹೊಸ ಕಲ್ಯಾಣಕಟ್ಟೆಯನ್ನು ನಿರ್ಮಿಸುವ ಯೋಜನೆಯಿದೆಯೆಂದು ತಿ. ತಿ. ದೇ. ಗಳ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ವಿಶ್ವನಾಥಂ ಅವರು ತಿಳಿಸಿದ್ದಾರೆ.

ತಿರುಮಲೆಯ ದೇವಾಲಯದ ಹಿಂದೆ ಇರುವ ಸ್ಥಳದಲ್ಲಿ ಈ ಹೊಸ ಕ್ಯೂ ಕಾಂಪ್ಲೆಕ್ಸ್ ನಿರ್ಮಿಸಲು ಇರುವ ಅವಕಾಶಗಳನ್ನು ಪರಿಶೀಲಿಸುತ್ತಿರುವುದಾಗಿ ಅವರು ತಿಳಿಸಿದರು.

## ಆರ್ಜಿತ ಸೇವೆಯಾಗಿ ಕಲ್ಯಾಣೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಸ್ವಾಮಿಗೆ ಕಲ್ಯಾಣೋತ್ಸವವನ್ನು ಆರ್ಜಿತಸೇವೆಯನ್ನಾಗಿ ಪ್ರವೇಶಗೊಳಿಸಲು ತೀರ್ಮಾನಿಸಲಾಗಿದೆ. ಕಲ್ಯಾಣೋತ್ಸವ ಸೇವೆಯನ್ನು ಮಾಡಬಯಸುವ ಗೃಹಸ್ಥರು ಎರಡು ಸಾವಿರ ರೂಗಳ ಆರ್ಜಿತ ಸೇವಾಶುಲ್ಕವನ್ನು ನೀಡಬೇಕಾಗುತ್ತದೆ.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯಕ್ಕೆ ಬರುವ ಯಾತ್ರಿಕರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದ್ದು, ಭಕ್ತಾದಿಗಳ ಅಪೇಕ್ಷೆ, ಅನುಕೂಲಗಳ ದೃಷ್ಟಿಯಿಂದ ಈ ಸೇವೆಯನ್ನು ಆರಂಭಿಸಲಾಗಿದೆ.

## ಕಾಕಿನಾಡದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ

ಕಾಕಿನಾಡದಲ್ಲಿ ತಿ. ತಿ. ದೇ. ನಿರ್ಮಿಸಿರುವ ಕಲ್ಯಾಣಮಂಟಪವನ್ನು ಆಂಧ್ರ

ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಶನಿವಾರ 29–8–87 ರಂದು ಉದ್ಘಾಟಿಸಿದರು. ಈ ಕಾರ್ಯಕ್ರಮದಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು, ಆಂಧ್ರ ಪ್ರದೇಶದ ಧಾರ್ಮಿಕ ದತ್ತಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಮೊದಲಾದ ಹಿರಿಯರು ಭಾಗವಹಿಸಿದ್ದರು. (ಕಲ್ಯಾಣ ಮಂಟಪ ಹಾಗೂ ಉದ್ಘಾಟನೆಯ ದೃಶ್ಯಗಳನ್ನು ರಕ್ಷಾಪತ್ರದ ಮೂರನೇ ಭಾಗದಲ್ಲಿ ಕಾಣಬಹುದು.)

## ತಿರುಮಲೆಯಲ್ಲಿ ಉಪರಾಷ್ಟ್ರಪತಿ

ಭಾರತದ ಉಪರಾಷ್ಟ್ರಪತಿಯಾಗಿ ಆಯ್ಕೆ ಹೊಂದಿದ ಡಾ|| ಶಂಕರದಯಾಳಶರ್ಮ ಅವರು ತಮ್ಮ ಅಧಿಕಾರ ಸ್ವೀಕರಣಕ್ಕೆ ಮೊದಲು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ, ಆರಾಧಿಸಿದರು.

ಈ ಮೊದಲು ಕೇಂದ್ರದಲ್ಲಿ ಮಂತ್ರಿಗಳಾಗಿ, ಆಂಧ್ರ ಪ್ರದೇಶದ ರಾಜ್ಯಪಾಲರಾಗಿ ಕೆಲಸ ನಿರ್ವಹಿಸಿದ ಡಾ|| ಶರ್ಮ ಅವರು, ಉಪರಾಷ್ಟ್ರಪತಿಗಳಾಗಿ ಆಯ್ಕೆಯಾಗುವ ಮೊದಲು ಮಹಾರಾಷ್ಟ್ರದ ರಾಜ್ಯಪಾಲರಾಗಿದ್ದರು. ಈ ಎಲ್ಲ ಕೆಲಸದ ಅವಧಿಯಲ್ಲೂ ಅವರು ತಿರುಮಲೆಯ ಸ್ವಾಮಿಯ ಭಕ್ತರಾಗಿ ಇಲ್ಲಿಗೆ ಆಗಾಗ್ಗೆ ಬರುತ್ತ ಸ್ವಾಮಿಯ ಸೇವೆ ನಡೆಸುತ್ತಿದ್ದರು ಎಂಬುದನ್ನು ಇಲ್ಲಿ ನೆನೆಯಬಹುದಾಗಿದೆ.

ಆಲಯ ಮರ್ಯಾದೆಗಳೊಡನೆ ಡಾ|| ಶರ್ಮರನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಮತ್ತಿತರ ಅಧಿಕಾರಿಗಳು ಸ್ವಾಗತಿಸಿದರು. ನೂತನ ಉಪರಾಷ್ಟ್ರಪತಿಗಳಿಗೆ ವೇದೋಕ್ತ ಆಶೀರ್ವಾದವನ್ನೂ ನೀಡಲಾಯಿತು.

(ತತ್ಸಂಬಂಧಿ ಚಿತ್ರಗಳನ್ನು ರಕ್ಷಾಪತ್ರದ ಎರಡನೆಯ ಭಾಗದಲ್ಲಿ ಕಾಣಬಹುದು.)

## ಸ್ವಾಮಿಯ ಅಭಿಷೇಕದಲ್ಲಿ ಶ್ರೀ ಶ್ರೀ ಜಯೇಂದ್ರಸರಸ್ವತಿ ಸ್ವಾಮಿಜೀ

ಕಂಚಿ ಕಾಮಕೋಟಿ ಪೀಠದ ಶ್ರೀ ಶ್ರೀ ಜಯೇಂದ್ರಸರಸ್ವತಿ ಸ್ವಾಮಿಗಳು ತಿರುಪತಿ ತಿರುಮಲೆಗಳಿಗೆ ಆಗಮಿಸಿ ಸ್ವಾಮಿಯ ಆರಾಧನೆ ಅಭಿಷೇಕಗಳಲ್ಲಿ ಪಾಲುಗೊಂಡರು.

ಇದೇ ಸೆಪ್ಟೆಂಬರ್ ಹತ್ತರಂದು ತಿರುಪತಿಗೆ ಆಗಮಿಸಿದ ಸ್ವಾಮಿಗಳು ಶ್ರೀ ಗೋವಿಂದರಾಜಸ್ವಾಮಿಯನ್ನು ಆರಾಧಿಸಿದರು. ಆಲಯ ಅಧಿಕಾರಿಗಳು ಪುರೋಹಿತರು ವೇದ ಮಂತ್ರ ಪಠಣದಿಂದ ಸ್ವಾಮಿಗಳನ್ನು ಸ್ವಾಗತಿಸಿದರು. ನಂತರ ತ್ಯಾಗರಾಜಸ್ವಾಮಿ ಮಂಟಪದಲ್ಲಿ ಭಕ್ತರೊಂದಿಗೆ ಸ್ವಲ್ಪ ಕಾಲವಿದ್ದ ಸ್ವಾಮಿಗಳು ಅಂದು ಸಂಜೆ ತಿರುಮಲೆಯನ್ನು ಸೇರಿದರು. ಗರುಡಾದ್ರಿ ನಗರದ ಬಳಿ ದೇವಾಲಯದ ಅಧಿಕಾರಿಗಳು ಡೆಪ್ಯೂಟಿ ಇ. ಓ. ಶ್ರೀ ಮುನಿಕೃಷ್ಣನ್, ಎ. ಇ. ಓ. ಶ್ರೀ ಅಂಜನೇಯುಲು ನಾಯುಡು ಅವರನ್ನು ಸ್ವಾಗತಿಸಿದರು. ಅಲ್ಲಿಂದ ನಡೆದೇ ದೇವಾಲಯಕ್ಕೆ ಬಂದ ಅವರನ್ನು ಆಲಯ ಸಂಪ್ರದಾಯದಂತೆ ಪೇಷ್ಕಾರ್ ಪೀರಯ್ಯ ಅವರು ಆಲಯ ಪುರೋಹಿತರ ಮೂಲಕ ಅವರನ್ನು ಸ್ವಾಗತಿಸಿದರು. ಸ್ವಾಮಿಗಳು ಬೇಡಿ ಆಂಜನೇಯ ಸ್ವಾಮಿಯನ್ನು ಆರಾಧಿಸಿದನಂತರ ತಿರುಮಲೆಯ ಸ್ವಾಮಿಯ ಪೂಲಂಗಿ ಅಲಂಕರಣವನ್ನು ನೋಡಿದರು. ಮರುದಿನ ಶುಕ್ರವಾರ ಬೆಳಗ್ಗೆ ಸ್ವಾಮಿಯ ಅಭಿಷೇಕದಲ್ಲಿ ಪಾಲುಗೊಂಡ ಶ್ರೀ ಶ್ರೀ ಜಯೇಂದ್ರಸರಸ್ವತಿ ಸ್ವಾಮಿಗಳಿಗೆ ಶೇಷವಸ್ತ್ರವನ್ನೂ, ಕೊಡೈ, ಕಾಣಿಕೆಗಳನ್ನೂ ನೀಡಲಾಯಿತು.

---

## ತಿ. ತಿ. ದೇ. ಧರ್ಮಕರ್ತರ ಮಂಡಳಿ ತೀರ್ಮಾನಗಳು

ನಿಜಾಮಾಬಾದ್ ಜಿಲ್ಲೆಯ ವಾರ್ನಿಯಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

ಹೈದರಾಬಾದಿನ ಶ್ರೀ ರಾಮನಗರ ಕಾಲೋನಿಯಲ್ಲಿ ಕಲ್ಯಾಣ ಮಂಟಪ ಹಾಗೂ ಸಮುದಾಯ ಭವನ ನಿರ್ಮಾಣಕ್ಕಾಗಿ ನೀಡಿದ್ದ ರೂ 70,000 ಗಳನ್ನು ಅವರು ಹಿಂದು ವರ್ಷವಾದರೂ ಬಳಸಿಕೊಳ್ಳದೆ ಇರುವುದರಿಂದ ಅದನ್ನು ಹಿಂದಿರುಗಿಸಬೇಕೆಂದು ಕೇಳಲು ತೀರ್ಮಾನಿಸಲಾಯಿತು.

ಹರಳುಗಳ ಬಂಗಾರದ ಹರಾಜಿನಲ್ಲಿ ಕೆಲಸ ಮಾಡಿದ ತಿ. ತಿ. ದೇ. ಉದ್ಯೋಗಿಗಳಿಗೆ 5 ಗ್ರಾಂಗಳ ಶ್ರೀ ವೆಂಕಟೇಶ್ವರ ಸ್ವಾಮಿಯ ಬಂಗಾರದ ಪದಕ ಹಾಗೂ ಶ್ಲಾಘನಾ ಪತ್ರಗಳನ್ನು ನೀಡಿ ಪುರಸ್ಕರಿಸಲು ತೀರ್ಮಾನಿಸಲಾಯಿತು.

ತಿ. ತಿ. ದೇ. ಗಳ ಬಾಲಾಜೀ ಅಂಗವಿಕಲ ಆಸ್ಪತ್ರೆಯಲ್ಲಿ ಡಾ|| ಕೆ. ವಿ. ಸುಬ್ಬರಾವ್ ಅವರ ಸೇವೆಯನ್ನು ವೇತನವಿಲ್ಲದೆ ಆನರರಿ ಪೀಡಿಯಾಟ್ರಿಕ್ ಕನ್ಸಲ್ಟೆಂಟ್ ಆಗಿ ಪಡೆಯಲು ತೀರ್ಮಾನಿಸಲಾಯಿತು.

ಧರ್ಮಪ್ರಚಾರಿಣಿ ಪರಿಷತ್‌ನ ಆಡಳಿತ ಮಂಡಳಿಯಲ್ಲಿ ತಿ. ತಿ. ದೇ. ಬೋರ್ಡ್ ಪರವಾದ ಸದಸ್ಯರಾಗಿ ನಾಮಕರಣ ಹೊಂದಿದ್ದ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಧಾರ್ಮಿಕ ದತ್ತಿ ಇಲಾಖಾಮಂತ್ರಿಗಳಾದ್ದರಿಂದಾಗಿ ಖಾಲಿಯಾದ ಅವರ ಸ್ಥಳಕ್ಕೆ ಮತ್ತೊಬ್ಬ ಬೋರ್ಡ್ ಸದಸ್ಯರಾದ ಶ್ರೀ ಡಾ|| ದೇವನಾಥನ್ ಅವರನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

ತಿ. ತಿ. ದೇ. ಗಳ ಮೂಗ ಬಧಿರ ಪಾಠಶಾಲೆಯನ್ನು ಪ್ರೌಢಶಾಲೆಯನ್ನಾಗಿ ಅಭಿವೃದ್ಧಿಗೊಳಿಸಿ 1987–88 ರಲ್ಲಿ 8 ನೇ ತರಗತಿಯನ್ನು ಆರಂಭಿಸಲು ತೀರ್ಮಾನಿಸಲಾಯಿತು.

ತಿ. ತಿ. ದೇ. ಗಳ ವೇದಪಾರಾಯಣ ಯೋಜನೆಯಡಿಯಲ್ಲಿ ವೇದಪಾರಾಯಣವನ್ನು ದಿನವೊಂದಕ್ಕೆ ನಾಲ್ಕುಗಂಟೆಗೆ ಇಳಿಸಿ ತಿಂಗಳಿಗೆ ಎರಡು ಆವೃತ್ತಿಗಳನ್ನು ಮುಗಿಸುವಂತೆಯೂ, ಸಂಜೆ ವಿದ್ಯಾರ್ಥಿಗಳಿಗೆ ವೇದಪಾಠವನ್ನು ಹೇಳುವಂತೆಯೂ ವೇದರಕ್ಷಣ ಸಂಸ್ಥೆ ಮಾಡಿದ್ದ ಏರ್ಪಾಡನ್ನು ಅನುಮೋದಿಸಲಾಯಿತು.



## ವಿಮಾನ ಸಂಚಾರ - ವೇಳೆ ಬದಲಾವಣೆ

ಇನ್ನು ಮುಂದೆ ಇಂಡಿಯನ್ ಏರ್–ಲೈನ್ಸ್‌ನವರ ತಿರುಪತಿ ವಿಮಾನಪ್ರಯಾಣದ ವೇಳೆಗಳಲ್ಲಿ ಬದಲಾವಣೆಯಾಗುವುದೆಂದು ತಿರುಪತಿ ಸ್ಟೇಷನ್ ಮ್ಯಾನೇಜರ್ ಶ್ರೀ ಜಿ. ಸುಂದರರಾವ್ ತಿಳಿಸಿದ್ದಾರೆ. ಹೊಸ ವೇಳಾಪಟ್ಟಿಯಂತೆ ಇನ್ನು ಮುಂದೆ ಹೈದರಾಬಾದಿನಿಂದ ವಿಜಯವಾಡ ತಿರುಪತಿ ಮಾರ್ಗವಾಗಿ ಮದ್ರಾಸು ಸೇರುವ 548 – ವಿಮಾನ ಹೈದರಾಬಾದಿನಲ್ಲಿ ಬೆಳಗ್ಗೆ 10–05 ಕ್ಕೆ ಬಿಟ್ಟು 12–40 ಕ್ಕೆ ತಿರುಪತಿ ಸೇರುತ್ತದೆ. ಈ ವಿಮಾನ ಇಲ್ಲಿಂದ ಮಧ್ಯಾಹ್ನ 1–00 ಗಂಟೆಗೆ ಮದ್ರಾಸಿಗೆ ಹೊರಡುತ್ತದೆ. ಇದೇ ರೀತಿಯಲ್ಲಿ ಮದ್ರಾಸಿನಿಂದ ತಿರುಪತಿ ವಿಜಯವಾಡಗಳ ಮೂಲಕ ಹೈದರಾಬಾದ್ ಸೇರುವ 547 ವಿಮಾನ ಮಧ್ಯಾಹ್ನ 2 ಗಂಟೆಗೆ ಮದ್ರಾಸನ್ನು ಬಿಟ್ಟು 2–35 ಕ್ಕೆ ತಿರುಪತಿ ಸೇರುವುದು. ನಂತರ ತಿರುಪತಿ ಯಿಂದ 2–55 ಕ್ಕೆ ಹೈದರಾಬಾದಿಗೆ ಹೊರಡುವುದು.

ಈ ಬದಲಾವಣೆ ಸೆಪ್ಟೆಂಬರ್ 18 ರಿಂದ ಜಾರಿಗೆ ಬಂದಿರುತ್ತದೆ.

## ತಿರುಪತಿಯಲ್ಲಿ ತಿ. ತಿ. ದೇ. ಸಭಾಂಗಣ

ತಿರುಪತಿಯಲ್ಲಿ ಪಟ್ಟಣದ ಡಿ. ಪಿ. ಡಬ್ಲ್ಯೂ. ಸ್ಟೋರ್ಸ್ ಹಿಂಭಾಗದ ಆರು ಸಾವಿರ ಚ. ಗಜಗಳ ಸ್ಥಳದಲ್ಲಿ ಒಂದು ಸಭಾಂಗಣವನ್ನು ನಿರ್ಮಿಸಬೇಕೆಂದು ತಿ. ತಿ. ದೇ. ತೀರ್ಮಾನಿಸಿದೆ. ತಿ. ತಿ. ದೇ. ಟ್ರಸ್ಟ್‌ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಅವರು ಈ ಬಗ್ಗೆ ವಿವರ ನೀಡುತ್ತ ಸುಮಾರು 50 ಲಕ್ಷ ರೂಗಳ ವೆಚ್ಚದ ಈ ಸಭಾಂಗಣವನ್ನು ತಿ. ತಿ. ದೇ. ಯೇ ನಿರ್ವಹಿಸುವುದೆಂದೂ, ಇಲ್ಲಿ ಸಾಂಸ್ಕೃತಿಕ, ಧಾರ್ಮಿಕ ಕಾರ್ಯಕ್ರಮಗಳಿಗೆ ಮಾತ್ರ ಅನುಮತಿ ನೀಡಲಾಗುವುದು ಎಂದೂ ತಿಳಿಸಿದರು.

ರಾಮಬಗೀಚಾ ಅತಿಥಿಗೃಹದ ಬಳಿ 40 ಲಕ್ಷ ರೂಗಳ ವೆಚ್ಚದಲ್ಲಿ ಒಂದು ಕ್ಯಾಂಟೀನ್ ನಿರ್ಮಾಣ ಮಾಡಲಾಗುವುದೆಂದೂ, ಮುಂದುಮುಂದೆ ಅನ್ನದಾನ ಯೋಜನೆಯನ್ನು ವ್ಯಾಪಕಗೊಳಿಸಲು ಅನುವಾಗುವಂತೆ 45 ಲಕ್ಷ ರೂಗಳ ವೆಚ್ಚದಲ್ಲಿ ಅನ್ನದಾನ ಭವನವನ್ನು ವಿಸ್ತೃತಗೊಳಿಸಲು ತೀರ್ಮಾನಿಸಲಾಗಿದೆಯೆಂದೂ ಅವರು ತಿಳಿಸಿದರು.

ನಾಣ್ಯಗಳು, ನೋಟುಗಳನ್ನು ಲೆಕ್ಕಿಸಲು ಹೆಚ್ಚಿನ ಎರಡು ಯಂತ್ರಗಳನ್ನು ಜಪಾನ್‌ನಿಂದ ಕೊಳ್ಳಲಾಗುವುದೆಂದೂ ಇವು ಒಂದೊಂದೂ 85 ಸಾವಿರ ರೂಗಳ ಬೆಲೆಯವು ಎಂದೂ, ಇವು ನಿಮಿಷಕ್ಕೆ 800 ನೋಟುಗಳನ್ನು ಲೆಕ್ಕಮಾಡುತ್ತವೆಯೆಂದೂ ವಿವರಿಸಿದರು.

ತಿ. ತಿ. ದೇ. ಉದ್ಯೋಗಿಗಳಿಗೆ ಯಾತ್ರಿಕ ಭತ್ಯವನ್ನು ಮೂಲವೇತನದ ಹತ್ತು ಶತಾಂಶದಿಂದ ಹನ್ನೆರಡು ಶತಾಂಶಕ್ಕೆ ಏರಿಸಲು ತೀರ್ಮಾನಿಸಲಾಯಿತೆಂದೂ, ಇದಕ್ಕಾಗಿ 30 ಲಕ್ಷ ರೂಗಳ ಅಧಿಕ ವೆಚ್ಚವಾಗುವುದೆಂದೂ ಅವರು ತಿಳಿಸಿದರು. ಆಯುರ್ವೇದ ಕಲಾಶಾಲೆಯ ವಿದ್ಯಾರ್ಥಿಗಳ ಪೋಷಕರ ಆದಾಯವನ್ನನುಸರಿಸಿ, ಅವರಿಗೆ ವಿದ್ಯಾಶುಲ್ಕ ವಿನಾಯಿತಿ ನೀಡಲು ತೀರ್ಮಾನಿಸಲಾಯಿತು ಎಂದೂ ಅವರು ತಿಳಿಸಿದರು.

ವೇದಪಾಠಶಾಲೆಯನ್ನು ನರಸಿಂಗಾಪುರದಿಂದ ಕಲ್ಯಾಣಿ ಡ್ಯಾಂ ಬಳಿಗೆ ಸ್ಥಳಾಂತರಿಸಲಾಗಿದೆಯೆಂದೂ, ಇದು ಧರ್ಮಪ್ರಚಾರಿಣಿ ಪರಿಷತ್ ಆಶ್ರಯದಲ್ಲಿರುವುದೆಂದೂ ಅವರು ವಿವರಿಸಿದರು.

## ಕೋಲಾರದಲ್ಲಿ ಗಣೇಶೋತ್ಸವ

ಕೋಲಾರದ ಹಳೆ ಮಾಧ್ಯಮಿಕ ಶಾಲೆ ಆವರಣದಲ್ಲಿ ದಿನಾಂಕ 28–8–87 ರಿಂದ 5–9–87 ರವರೆಗೆ ಒಂದುವಾರ ಕಾಲ ಶ್ರೀ ಗಣೇಶೋತ್ಸವವನ್ನು ಸಡಗರ ಸಂಭ್ರಮಗಳಿಂದ ಸ್ಥಳೀಯ ಸಾರ್ವಜನಿಕ ಶ್ರೀ ಗಣೇಶೋತ್ಸವ ಸಮಿತಿಯ ಆಶ್ರಯದಲ್ಲಿ ಸಂತ ಶ್ರೀ ಹರಿಹರಾನಂದ ಸರಸ್ವತಿ ಅವರ ನೇತೃತ್ವದಲ್ಲಿ ಆಚರಿಸಲಾಯಿತು.

ದಿನಾಂಕ 28–8–87 ರ ಬೆಳಗ್ಗೆ ಸಂತ ಶ್ರೀ ಹರಿಹರಾನಂದ ಸರಸ್ವತಿ ಸ್ವಾಮಿಜೀ ಹಾಗೂ ಚಿನ್ಮಯ ಮಿಷನ್ನಿನ ಬ್ರಹ್ಮಚಾರಿಣಿ ಅರ್ಚನಾಚೈತನ್ಯ ಅವರ ಹಿರಿತನದಲ್ಲಿ 8 ಅಡಿಗೂ ಎತ್ತರದ ಭವ್ಯ ಗಣೇಶ ಮೂರ್ತಿಯನ್ನು ಸ್ಥಾಪಿಸಿ ಪ್ರಾಣಪ್ರತಿಷ್ಠೆ ಮಾಡಲಾಯಿತು. ನಂತರ ಸ್ಥಳೀಯ ಆಸ್ಪತ್ರೆಗಳಲ್ಲಿ ರೋಗಿಗಳಿಗೆ ಹಣ್ಣುಗಳ ವಿತರಣೆ ನಡೆದು ಅಂದು ಸಂಜೆ ಸ್ವಾಮಿಜೀಗಳ ಆಶೀರ್ವಚನ ಸಭೆ ನಡೆಯಿತು.

ಏಳು ದಿನಗಳೂ ಬೆಳಗ್ಗೆ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದು, ಗಾಯನ ಗಂಧರ್ವ ಶ್ರೀ ರಮಣ ಕುಮಾರ್ ವೃಂದ, (ಸಂಗೀತ) ಶ್ರೀ ಎಚ್. ಕೆ. ನಾರಾಯಣ ವೃಂದ, (ರಮಣಾಂಜಲಿ) ಶ್ರೀಮತಿ ರತ್ನಮಾಲಾಪ್ರಕಾಶ್ ವೃಂದ (ಭಕ್ತಿ ಗೀತೆಗಳು) ಅಮಟೂರು ಬಾಳಪ್ಪ (ಐತಿಹಾಸಿಕ ನಾಟಕ) ಭರತನಾಟ್ಯ ಹರಿಕಥೆ ಯಕ್ಷಗಾನ ಮೊದಲಾದವು ನಡೆದವು.

4–9–87 ರ ಬೆಳಗ್ಗೆ ಉತ್ಸವ ಸಮಿತಿಯ ಆಶ್ರಯದಲ್ಲಿ ಸಾಮೂಹಿಕ ವಿವಾಹಗಳು ಸರಳವಾಗಿ ನಡೆದವು. ಕರ್ನಾಟಕದ ರೇಷ್ಮೆ ಇಲಾಖೆ ಮಂತ್ರಿ ಶ್ರೀ ಕೆ. ಎಂ. ಮುನಿಯಪ್ಪ ಹಾಗೂ ಸ್ಥಳೀಯ ಶಾಸಕ ಶ್ರೀ ಕೆ. ಆರ್. ಶ್ರೀನಿವಾಸಯ್ಯ ಅವರು ಅತಿಥಿಗಳಾಗಿ ಭಾಗವಹಿಸಿದ್ದರು. ಸಂತ ಶ್ರೀ ಹರಿಹರಾನಂದ ಸರಸ್ವತಿಗಳು ವಧೂವರರಿಗೆ ಆಶೀರ್ವಾದ ಮಾಡಿ, ಕೋಲಾರದ ಅರಣ್ಯ ಅಭಿವೃದ್ಧಿ ಇಲಾಖೆಯ ಕೊಡುಗೆಯಾದ ಹಲಸು, ಸಂಪಿಗೆ ಗಿಡಗಳನ್ನು ವಧೂವರರಿಗೆ ಮದುವೆಯ ಬಳುವಳಿಯಾಗಿ ನೀಡಿದರು.

5–9–87 ರಂದು ಭವ್ಯವಾದ ಮೆರವಣಿಗೆಯಲ್ಲಿ ಸಾಮೂಹಿಕ ಭಜನೆ, ವೃಂದಗಾನಗಳಲ್ಲಿ ಗಣೇಶನನ್ನು ಬಿಜಯಗೈಸಿ ವಿಸರ್ಜನೆ ಮಾಡಲಾಯಿತು.

## ಸಪ್ತಗಿರಿ ಪ್ರಸಾರ ಬಹುಮಾನ

ಸಪ್ತಗಿರಿಯ ಅತ್ಯಧಿಕ ಪ್ರಸಾರದ ವಾರ್ಷಿಕ ಬಹುಮಾನವು 1985, 86 ನೇ ವರ್ಷಗಳಿಗಾಗಿ ತೆಲುಗಿನಲ್ಲಿ ಶ್ರೀ ಉಮಾಶಂಕರ್, ಗುಂಟೂರು ಇವರಿಗೂ ತಮಿಳಿನಲ್ಲಿ ಶ್ರೀ ಎ. ಟಿ. ಕೃಷ್ಣನ್, ಮದ್ರಾಸು ಇವರಿಗೂ ನೀಡಲಾಗಿದೆ.

ವಾರ್ಷಿಕ ಬಹುಮಾನದಲ್ಲಿ ಹತ್ತು ಗ್ರಾಂಗಳ ಒಂದು ಬೆಳ್ಳಿಯ ಪದಕವೂ ಇರುತ್ತದೆ.

★

## ಮುಂದಿನ ಸಂಚಿಕೆಯಲ್ಲಿ .... .... ...

### ಸಪ್ತಗಿರಿ. — ನವಂಬರ್ 1987

**ಉತ್ತರದೇಶದ ವಿಷ್ಣು ಕ್ಷೇತ್ರಗಳು**
– ರಘುಸುತ

**ಗೀತಾಸಾರ**
–ಶ್ರೀ ಶ್ರೀ ಸಂತ ಹರಿಹರಾನಂದ ಸರಸ್ವತೀ

**ತಿರುಮಂಗೈ ಆಳ್ವಾರ್**
– ಡಿ. ಕೃಷ್ಣೈಯಂಗಾರ್

**ಗೀತಾರ್ಥ ಪ್ರಕಾಶ**
– ಎಂ. ಓ ಎಸ್. ಅಯ್ಯಂಗಾರ್

**ಕನಕದಾಸ ಪ್ರಾಶಸ್ತ್ಯ**
– ಜಿ. ಚೆನ್ನಯ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯದಿನಗಳು

### ನವಂಬರ್ 1987

1. ಭಾನುವಾರ ಗೀತಾಜಯಂತಿ.
ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ.
5. ಗುರುವಾರ ......ತೆಪ್ಪೋತ್ಸವ ಸಮಾಪ್ತಿ ಕಾರ್ತೀಕ ಪರ್ವ ದೀಪೋತ್ಸವ.
16. ಸೋಮವಾರ ತಿರುಚಾನೂರು ಶ್ರೀಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ಅಂಕುರಾರ್ಪಣೆ
17. ಮಂಗಳವಾರ " " ಧ್ವಜಾರೋಹಣ
21. ಶನಿವಾರ " " ಗಜವಾಹನೋತ್ಸವ
22. ಭಾನುವಾರ " " ಗರುಡವಾಹನ
24. ಮಂಗಳವಾರ " " ರಥೋತ್ಸವ
25. ಬುಧವಾರ " " ಧ್ವಜಾವರೋಹಣ
ತಿರುಮಂಗೈ ಆಳ್ವಾರ್ ಉತ್ಸವಾರಂಭ
26. ಗುರುವಾರ ಸುಬ್ರಹ್ಮಣ್ಯ ಷಷ್ಠಿ

## ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯು ನೇರ ಚಂದಾದಾರರ ಅಕ್ಟೋಬರ್ 1987ಕ್ಕೆ ಚಂದಾ ಅವಧಿ ಮು ಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀ ಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ ಮಾಡಬೇಕೆಂದು ವಿನಂತಿ.

14, 43, 45, 59, 67, 88, 9
119, 145, 174, 175, 189, 190, 192
195, 197, 227, 248, 258, 266, 269
270, 274, 278, 384, 461, 476, 509
527, 539, 542, 543, 545, 548, 550
552, ರಿಂದ 557, 561, 562, 564, 565
690, 1031, 1032, 1037, 1038, ರಿಂ
1058, 1060, 1062, 1063, 1065
1066, 1067, 1068, 10 0, 1072
1073, 1074, 1075, 366, 377, 378
387, 542,

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬ ಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ. ವಿಳಾಸ ಬ ಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮ ಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾ ಬರೆಯು ಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿ**
**ತಿ. ತಿ. ದೇ. ತಿರುಪತಿ**

## ತಿ. ತಿ. ದೇ. ಕ್ಯಾಸೆಟ್ ಮಾರಾಟ

ತಿ. ತಿ. ದೇ. ಗಳ ಪರವಾಗಿ ಅವರ ಧಾರ್ಮಿ ಕ್ಯಾಸೆಟ್‌ಗಳನ್ನು ತಯಾರಿಸಿ ಮಾರಾಟ ಮಾಡು ಹಕ್ಕುಗಳನ್ನು ಒಂದು ವರ್ಷಕ್ಕಾಗಿ ಮದರಾಸಿ ಮಾಸ್ಟರ್ ರೆಕಾರ್ಡಿಂಗ್ ಕಂಪನಿಯವರಿ (ಸಂಗೀತಾ) ನೀಡಲಾಗಿದೆಯೆಂದು ಈ ಮೂಲ ಸಂಬಂಧ ಪಟ್ಟವರಿಗೆ ತಿಳಿಸಲಾಗಿದೆ.

ಕಾರ್ಯನಿರ್ವಹಣಾಧಿಕಾರಿ ತಿ. ತಿ. ದೇ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy. Manager. T. T. D. Press. Tirupati – 517501.



Sri N.T. Rama Rao, Chief Minister of Andhra Pradesh, declares open the T.T.D. Kalyana Mandapam at Kakinada



